

ಕನ್ನಡ ವಿಶ್ವವಿದ್ಯಾಲಯ, ಹಂಪಿ

# "ಸಿಮೋನ್ ದ ಬೋವಾ ಮತ್ತು ಸ್ತ್ರೀವಾದಿ ಚಿಂತನೆ"

## (ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ, ನಂತರ ರೂಪಿತಳಾಗುತ್ತಾಳಷ್ಟೆ)

ಕನ್ನಡ ಎಂ. ಫಿಲ್ ಪದವಿಗಾಗಿ ಕಾವ್ಯಮಂಡಲದ ವತಿಯಿಂದ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ನಿಬಂಧ






**ಕಾವ್ಯಮಂಡಲ**
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ, ಬೆಂಗಳೂರು-೦೪.



2008

# ಪರಿವಿಡಿ





340

## ಪೀಠಿಕೆ

''ಮಾನವನ ಎಲ್ಲಾ ಹೋರಾಟಗಳು ಸಮಾನತೆಗಾಗಿಯೇ, ಮಾನವೀಯ ಮೌಲ್ಯಗಳನ್ನು ಕಾಣುವ ಹಂಬಲಕ್ಕಾಗಿಯೇ ಅಲ್ಲವೇ ?'' ನೊಂದವರು, ಕಳೆದುಕೊಂಡವರು, ಬೆಳಕನ್ನು ಕಾಣಲು ಮಾಡುವ ಹೋರಾಟ, ಆ ಹೋರಾಟಕ್ಕೆ ಬೆಂಬಲ ನೀಡುವುದು ಸಿದ್ಧಾಂತಗಳು, ''ಸ್ತ್ರೀವಾದ'' ಎಂಬ ಚಿಂತನೆಯ ಕಿಡಿ ಹೊತ್ತಿದ್ದಕ್ಕೆ ನಿರ್ದಿಷ್ಟ ಸಾಕ್ಷಿಗಳಿಲ್ಲ. ಯಾವುದೇ ಕೊರತೆಯುಂಟಾದರೂ ಆ ಕೊರತೆಯನ್ನು ತುಂಬುವ ಪ್ರಯತ್ನ ನಡೆಯುತ್ತದೆ. ಸ್ತ್ರೀವಾದ ಎಂಬುದು ಸಿದ್ಧಾಂತವಾಗುವುದಕ್ಕೆ ಮುನ್ನ ಸ್ತ್ರೀಯರಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ, ಕೌಟುಂಬಿಕ ಅಸಮಾನತೆಗಳು ಎದುರಾದಾಗ ಅನಿವಾರ್ಯವೂ, ಅಗತ್ಯವೋ ಎಂಬಂತೆ ಅದಕ್ಕೆ ಪ್ರತಿಕ್ರಿಯೆ ಹುಟ್ಟಿಕೊಂಡಿತು. ಆ ಪ್ರತಿಕ್ರಿಯೆಯ ಸ್ತ್ರೀವಾದವಾಗಿ ಇಡಿ ಪ್ರಪಂಚವನ್ನು ಆವರಿಸಿತೆಂದರೆ ತಪ್ಪಾಗಲಾರದು. ಸ್ತ್ರೀವಾದ ಎನ್ನುವುದು ನಿರ್ದಿಷ್ಟ ಪ್ರದೇಶಕ್ಕೆ, ಕಾಲಕ್ಕೆ ಸೀಮಿತವಾದುದಲ್ಲ. ಇದು ನಿರಂತರವಾದ ಹುಡುಕಾಟವಾಗಿ ಇಲ್ಲಿಯವರೆಗೂ ಬೆಳೆಯುತ್ತಾ ಬಂದಿದೆ.

ಸ್ತ್ರೀ ''ಅನ್ಯಲಿಂಗ'' ವಾಗಿ ಬೇರ್ಪಟ್ಟ ರೀತಿ, ಬೇರ್ಪಟ್ಟಿರುವುದು ಅಪ್ರಜ್ಞಾಪೂರ್ವಕವಾಗಿದ್ದರೂ, ಅದನ್ನು ಗ್ರಹಿಸಿದರೂ, ಮಿತಿಯೊಳಗೆ ಏರ್ಪಟ್ಟ ಚಿಂತನೆ ಎದು ಹೇಳಲು ಸಾಧ್ಯವಿದೆ. ಏನೇ ಆದರೂ ಫ್ರಾನ್ಸ್ ಸ್ತ್ರೀವಾದಿ ಚಿಂತಕಿ ಸಿಮೊನ್‌ದ ಬೋವಾ ತನ್ನ 'ದಿ ಸೆಕೆಂಡ್ ಸೆಕ್ಸ್' ಕೃತಿಯ ಮೂಲಕ ''ಸ್ತ್ರೀ'' ಎಂದರೇನು ? ಅವಳ ತುಡಿತ, ಅವಳ ಸ್ಥಾನ, ಅವಳು ಮನುಷ್ಯಳು ಎಂಬ ಮೂಲಭೂತ ಅಂಶವನ್ನು ಸಾರಿದ್ದಾಳೆ. ಸ್ತ್ರೀವಾದಕ್ಕೆ ತಾತ್ವಿಕವಾದ ಚೌಕಟ್ಟನ್ನು ಒದಗಿಸಿಕೊಟ್ಟ ಮೂಲ ಬೇರು ಎಂದು ಬೋವಾಳನ್ನು ಕರೆಯಬಹುದು. ಕನ್ನಡ ಸ್ತ್ರೀವಾದಿ ಚಿಂತನೆ ಪಾಶ್ಚಾತ್ಯರ ಚಿಂತನೆಗೆ ಒರಗಿದರೂ ಅದಕ್ಕೆ ಹೊಸ ಪ್ರಕ್ರಿಯೆ ದೊರಕಿಸಿಕೊಟ್ಟಿದೆ ಎಂಬುದನ್ನು ಕಾಣುವ ಉದ್ದೇಶವನ್ನು ಹುಡುಕಾಟ ಮಾಡಬಹುದಾಗಿದೆ.

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಈ ಸಂದರ್ಭದಲ್ಲಿ 'ಸಿಮಾನ್ ದ ಬೋವಾ ಸ್ತ್ರೀವಾದಿ ಚಿಂತನೆ'' ಎಂಬ ವಿಷಯದ ಉದ್ದೇಶ ಮತ್ತು ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ. ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆಯು ಪಾಶ್ಚಾತ್ಯ ಸ್ತ್ರೀವಾದಿ ಗುರುತಿಸಿಕೊಳ್ಳಲಾಗಿದೆ. ಚಿಂತನೆಯನ್ನು ಚಿಂತಕರನ್ನು ಪರಿಚಯ ಮಾಡಿಕೊಡುವುದು ಎಂಬುದು ತಿಳಿದಿರುವ ಸಂಗತಿ. ಆದರೆ ಕನ್ನಡ ಸ್ತ್ರೀವಾದಿ ಚಿಂತನೆಗೆ ತನ್ನದೇ ಆದ ಅನನ್ಯತೆ ಇದೆ ಎಂಬುದನ್ನು ಪಾಶ್ಚಿಮಾತ್ಯ ಚಿಂತನೆಯೊಡನೆ ಇಟ್ಟು ನೋಡಿದಾಗ ಹೊಸ ಸತ್ಯವೇನಾದರೂ ಕಾಣಲು ಸಾಧ್ಯವಿದೆಯಾ ಎಂಬುದರ ಹುಡುಕಾಟ ಅಗತ್ಯವಿದೆ. ಆದ್ದರಿಂದ ಸಿಮಾನ್‌ನ ಬೋವಾಳ ಆಲೋಚನೆಗೆ ಕನ್ನಡ ಸ್ತ್ರೀ ಸಂವೇದನೆಯನ್ನು ಜೊತೆಗಿಟ್ಟು ನೋಡುವ ಪ್ರಯತ್ನವನ್ನು ನನ್ನ ಪ್ರಬಂಧದ ಮೂಲಕ ಮಾಡುತ್ತೇನೆ. ಕನ್ನಡ ಸಾಹಿತ್ಯ ಘಟ್ಟದಲ್ಲಿ ''ನವೋದಯ'' ಘಟ್ಟವು Romantism ನ ಪ್ರಭಾವಕ್ಕೆ ಒಳಗಾಗಿದೆ ಎಂದು ಹೇಳಿದರೂ, ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಮಧುರಚೆನ್ನ, ಡಿ.ವಿ.ಜಿ., ಪು.ತಿ.ನ. ರಂತಹವರಿಂದ ನೆನಪಿನಲ್ಲಿರುವಂತಹ ಸಾಹಿತ್ಯ ರಚನೆ ಆಗಿಲ್ಲವೇ? ಹಾಗೆಯೇ ಸ್ತ್ರೀವಾದ ಪಾಶ್ಚಾತ್ಯ ಚಿಂತನೆಯನ್ನು ಪರಿಚಯ ಮಾಡಿಕೊಡುವಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಉಳಿಸಿಕೊಳ್ಳುವುದರಲ್ಲಿ ಅನುಮಾನವೇ ಇಲ್ಲ.

ಜೈವಿಕವಾಗಿ ಹೆಣ್ಣು ಗಂಡಿಗಿಂತ ಭಿನ್ನವಾಗಿದ್ದಾಳೆ. ಆ ಭಿನ್ನತೆಯೇ ಆಕೆಗೆ ಮುಳುವಾಗಿದೆ. ಹೆಣ್ಣು ಕೈಲಾಗದವಳು ಅಂದರೆ ಪುರುಷನಿಗಿಂತ ದೈಹಿಕವಾಗಿ ಅಸಮರ್ಥಳು ಎಂಬುದು ಸತ್ಯ. ಅದೇ ಕಾರಣದಿಂದ ಹೆಣ್ಣು ಸಾಮಾಜಿಕವಾಗಿ, ರಾಜಕೀಯವಾಗಿ, ವೈಯಕ್ತಿಕವಾಗಿ, ಆರ್ಥಿಕವಾಗಿ ಸಬಲಳಾಗುವ ಅವಕಾಶವೇ ಇಲ್ಲದಂತ ಪರಿಸ್ಥಿತಿ ಹಲವು ಕಡೆಗಳಲ್ಲಿ ಇರುವುದನ್ನು ನಾವು ದೈನಂದಿನ ಜೀವನದಲ್ಲಿ ನೋಡುತ್ತೇವೆ. ಸಮಾನತೆಯನ್ನು ಬಯಸುವುದು ಅದಕ್ಕಾಗಿ ಹೋರಾಟ ಮಾಡಬೇಕಾದ ಅನಿವಾರ್ಯತೆ ಒದಗಿ ಬಂದಿರುವುದು ಚಿಂತನೆ ಮಾಡುವಂತಹ ವಿಷಯ. ಇದೊಂದು ಒತ್ತಡವೆಂದು ಹೇಳಿದರೂ ತಪ್ಪಾಗಲಾರದು. ಸಮಾನತೆ ಎನ್ನುವುದು ಒಂದು ಆದಿಮ ಒತ್ತಡ ಎಂಬುದನ್ನು ನಾವು ಕಾಣಬಹುದು. ಆ ರೀತಿಯ ಒತ್ತಡದ ಫಲವಾಗಿ ಹೊರಹೊಮ್ಮಿರುವುದು ಸ್ತ್ರೀವಾದ, ಸ್ತ್ರೀತ್ವ, ಸ್ತ್ರೀವಾದಿ ಚಿಂತನೆ, ಈ ಚಿಂತನೆಯು ಆದಿಮವಾದುದು ಕಲಾತೀತವಾದುದು, ವಿಶ್ವಾತ್ಮಕವಾದುದು.

ಸ್ತ್ರೀವಾದ ಎನ್ನುವುದು ಎಂದು ಆರಂಭಗೊಂಡಿತು, ಎಂದು ಹುಡುಕಾಟ ಮಾಡಲು ಹೊರಟರೆ ಪುರುಷವಾದ ಎಂದು ಆರಂಭವಾಯಿತೋ ಅಂದೆ ಸ್ತ್ರೀವಾದವು ಆರಂಭವಾಯಿತು. ಇದೊಂದು ವಿಶ್ವಾತ್ಮಕವಾಗಿ ವಿಮೋಚನೆಯನ್ನು ಬಯಸುವ ಪರಿಸ್ಥಿತಿ ಎನ್ನಬಹುದು. ಕನ್ನಡದ ಸಂದರ್ಭದಲ್ಲಿ ೧೯೬೦ರ ದಶಕದಿಂದೀಚೆಗೆ ಒಂದು ಸಿದ್ಧಾಂತವಾಗಿ ಚರ್ಚೆಯಾಗುತ್ತಿದೆ. ಇಡೀ ವಿಶ್ವದಲ್ಲಿ ವಿಮೋಚನೆಯ ಆಶಯ ಸಹಜವಾಗಿಯೇ ಇದೆ. ಆದರೆ ಅದನ್ನು ಅಭಿವ್ಯಕ್ತಿಸುವ, ಸಿದ್ಧಾಂತವಾಗಿ ರೂಪಿಸುವ ಶೈಲಿಗಳು ಬೇರೆ. ವೈಯಕ್ತಿಕವೆನಿಸುವ ಎಷ್ಟೋ ಸಂದರ್ಭಗಳು ಸರ್ವವ್ಯಾಪಿಯಾಗಿಯೂ ಇದೆ ಎಂದು ಹೇಳಬಹುದು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀವಾದ ಕಳೆದ ಮೂವತ್ತು ವರ್ಷಗಳಲ್ಲಿ ಹೊಸ ರೂಪ ತಾಳಿದೆ. ಸ್ತ್ರೀವಾದ ಅನ್ವೇಶಿಸ್ತುಗಳೊಟ್ಟಿಗೆ ಸೇರಿ ತನ್ನ ಬೆಳವಣಿಗೆ ಮತ್ತು ವ್ಯಾಪ್ತಿಯನ್ನು ಹೆಚ್ಚಿಸಿಕೊಂಡಿದೆ. ಸ್ತ್ರೀಯರು ಬಯಸುವುದು ಸಮಾನತೆಯನ್ನು ಎಂಬ ಸತ್ಯ ಜಾಗತಿಕಮಟ್ಟದ್ದಾಗಿದೆ. ಸ್ತ್ರೀವಾದ ನಿರ್ದಿಷ್ಟವಾಗಿ ಇಂದೇ ಆರಂಭವಾಯಿತು ಎನ್ನುವುದಕ್ಕಿಂತ ಸಮಾಜದ ಒಂದು ಅಘೋಷಿತ ಮೌನಸಂಗ್ರಾಮವಾಗಿ ಬೆಳೆಯುತ್ತಾ ಬಂದಿದೆ. 'ಶಿಕ್ಷಣ'ಸ್ತ್ರೀಯರಿಗೆ ಹೊಸ ಹೊಸ ದಾರಿಯನ್ನು ತೆರೆದಿದೆ. ನಗರೀಕರಣ, ಜಾಗತೀಕರಣ, ಖಾಸಗೀಕರಣ, ಔದ್ಯೋಗಿಕರಣ, ಮಹಿಳೆಯರಿಗೆ ಹೊಸ ಅವಕಾಶ ತೆರೆದಿದೆ. ಈ ನಿಟ್ಟಿನಲ್ಲಿ ಮಹಿಳೆಯರೆಲ್ಲರೂ ಒಟ್ಟಾಗಿ ಸಂಘಟನೆಗೊಳ್ಳಲು ಅವಕಾಶವಿದೆ. ಜೊತೆಗೆ ಹೊಸ ಹೊಸ ಜವಾಬ್ದಾರಿಗಳನ್ನು ನಿರ್ವಹಿಸಬೇಕಾದ ಅನಿವಾರ್ಯತೆಯೂ ಇದೆ.

ವಿಮೋಚನೆ ಪಡೆಯಲು ಸ್ತ್ರೀಯರು ಬೇರೆ ಬೇರೆ ರೀತಿಯ ಮಾರ್ಗಗಳನ್ನು ಆರಿಸಿಕೊಂಡರು. ಕಳೆದುಕೊಂಡಿದ್ದನ್ನು ಗಳಿಸುವ ಪ್ರಯತ್ನ ಮಾಡಿದರು. ''ತಾಳುವಿಕೆಗಿಂತ ತಪವಿಲ್ಲ' ಎಂದು ಮೌನವಾಗಿ ಸುಮ್ಮನಿರುವ ಮಹಿಳೆಯರೊಂದೆಡೆ ಸಮಸ್ಯೆಗಳನ್ನು ನೇರವಾಗಿ ವಿರೋಧಿಸುವ ಮಹಿಳೆಯರು ಒಂದೆಡೆ ಇದ್ದಾರೆ. ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆಯು ಹೋರಾಟವಾಗಿ ಹೊರ ಹೊಮ್ಮದೆ ಬರವಣಿಗೆಯ ಮಾಧ್ಯಮವನ್ನು ಆರಿಸಿಕೊಂಡಿದ್ದಾರೆ. ಆದರೂ ಸಂಸ್ಕೃತಿ, ಆಚರಣೆ, ಆಚಾರ, ಅನಾಚಾರ ಎಂಬ ವಿಷಯಗಳು ಮಹಿಳಾ ಅಭಿವ್ಯಕ್ತಿಗೆ ಕಡಿವಾಣ ಹಾಕಿದೆ. ಆದರೆ ಸಿಮೊನ್‌ದ ಬೋವಾ ಹೆಣ್ಣು ಹೇಗೆ ಜೈವಿಕವಾಗಿ ವರ್ಗೀಕರಿಸಲ್ಪಟ್ಟಿದ್ದಾರೆ ಎಂಬುದನ್ನು ಚರ್ಚೆ ಮಾಡಿದ್ದಾಳೆ. ಮುಕ್ತವಾದ

ಆಲೋಚನೆಯ ಹಾದಿಯನ್ನು ಸಿಮೊನ್‌ದ ಬೋವಾ ಹಾಕಿಕೊಟ್ಟಿದ್ದಾಳೆ.

ಸ್ತ್ರೀವಾದಿ ಚಿಂತನೆಗೆ ಸಿಮೊನ್ ದ ಬೋವಾಳ ''ದಿ ಸೆಕೆಂಡ್ ಸೆಕ್ಸ್'' ಕೃತಿಯು ಬಹಳ ಗಟ್ಟಿ ತಳಹದಿಯನ್ನು ಹಾಕಿಕೊಟ್ಟಿದೆ. ಕನ್ನಡ ಸ್ತ್ರೀವಾದಿ ಚಿಂತನೆಯು ಹೊಸ ಹೊಸ ಸವಾಲುಗಳನ್ನು ಎದುರಿಸುತ್ತಿದೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಅಸಂಖ್ಯಾತ ಮಹಿಳಾ ಪಾತ್ರಗಳು ಅಪೇಕ್ಷಣೀಯವಾಗಿ ಚಿತ್ರಿತಗೊಂಡಿದೆ.

ಸಿಮಾನ್‌ದ ಬೋವಾ ಸಾಹಿತ್ಯ ರಚನೆಗೆ ತೊಡಗಿದಾಗ 'ದಿ ಸೆಕಂಡ್ ಸೆಕ್ಸ್' ಕೃತಿಯಲ್ಲಿ ಯಾವುದೇ ಪಾತ್ರಗಳ ಮೂಲಕ ವಿಶ್ಲೇಷಣೆ ಮಾಡದೆ ಸೈದ್ಧಾಂತಿಕವಾಗಿ ಆಲೋಚನೆ ಮಾಡುತ್ತಾ ತಮ್ಮ ಕೃತಿಯಲ್ಲಿ ಹೆಣ್ಣು 'ಅನ್ಯಳಾಗುವಿಕೆ'ಯನ್ನು ಚಿತ್ರಿಸಿದ್ದಾರೆ. ಈಕೆಯ ಕೃತಿಯಲ್ಲಿ ಆದಿಮಕಾಲದಿಂದ ಹೆಣ್ಣು, ಚಾರಿತ್ರಿಕ ಸಂದರ್ಭ, ಪ್ರಶ್ನೆಯ ತೀವ್ರತೆಗಳು, ಹುಡುಕಾಟ, ಹೀಗೆ ಹಲವಾರು ನೆಲೆಗಳಲ್ಲಿ ಸಿಮಾನ್‌ದ ಬೋವಾ ಚರ್ಚೆ ನಡೆಸಿದ್ದಾಳೆ.

ಸಿಮಾನ್‌ದ ಬೋವಾ ಎತ್ತಿದ ಪ್ರಶ್ನೆಗಳು, ಕಲಾತೀತವಾದ ಹುಡುಕಾಟ, ತೀವ್ರತೆ, ಸಂಘಟನೆಯ ಶಕ್ತಿ, ಹಲವಾರು ವಿವರಣೆಗಳು ಎಲ್ಲವನ್ನು ಕನ್ನಡ ಸ್ತ್ರೀವಾದಿ ಸಂವೇದನೆ ಹೊಂದಿರುವ ತುಡಿತದೊಟ್ಟಿಗೆ ಇಡುವ ಪ್ರಯತ್ನ ಇದಾಗಿದೆ.

# ಅಧ್ಯಾಯ-1

## ಆದಿ ಸ್ತ್ರೀವಾದಿ ಚಿಂತನೆ - ಸಿಮೂನ್ ದ ಬೋವಾ

''ಬಿಡುಗಡೆಯ ಹಾದಿ ಯಾವಾಗಲೂ ತೆರೆದಿರುತ್ತದೆ. ಆದರೆ ಆ ಹಾದಿ ಬಹಳ ಕಠಿಣವಾಗಿರುತ್ತದೆ'' ಎನ್ನುವುದಕ್ಕೆ ಸಾಕ್ಷಿ ಫ್ರಾನ್ಸ್ ಸ್ತ್ರೀವಾದಿ ಚಿಂತನೆಯ ಆದಿಸ್ತ್ರೀವಾದಿ ಚಿಂತಕಿ ಎಂದೇ ಕರೆಯಬಹುದಾದ ''ಸಿಮೂನ್‌ದ ಬೋವಾ'' ಆಕೆಯ ಬರಹ, ಜೀವನ ಶೈಲಿ, ಪರಸ್ಪರ ವೈರುಧ್ಯಗಳ ನಡುವೆ ಸಾರ್ಥಕತೆಯ ಬದುಕನ್ನು ಪೂರೈಸಿದ ಪ್ರೆಂಚ್ ತತ್ವಜ್ಞಾನಿ, ಕಾದಂಬರಿಕಾರ್ತಿ. ಈಕೆ ಹುಟ್ಟಿದ್ದು ಪ್ಯಾರಿಸ್‌ನ ಬೋರ್ಜ್ವಯಸ್ (Bourgeois) ಮನೆತನದಲ್ಲಿ ೧೯೦೮ರಲ್ಲಿ ಈಕೆಯ ತಂದೆ ಜಾರ್ಜ್ಸ್ ಬರ್ಟ್ರಾಂಡ್‌ದ ಬೋವಾ (Georges Bertrand de Beauvoir) ಈತನದು ವಕೀಲಿ ವೃತ್ತಿ, ಪ್ಯಾರಿಸ್ ವಿಶ್ವವಿದ್ಯಾಲಯ ಸಂಸ್ಥಾಪಕರಲ್ಲಿ ಒಬ್ಬರು. ತಾಯಿ ಪ್ರಾಂಕೋಯಿಸ್ ಬ್ರಾಸೂರ್ ಈಕೆ ಕ್ಯಾಥೋಲಿಕ್ ಚರ್ಚಿನಲ್ಲಿ ಧಾರ್ಮಿಕವಾಗಿ ತನ್ನನ್ನು ತಾನು ಅರ್ಪಿಸಿಕೊಂಡಿದ್ದಳು. ಆಕೆಗೆ ಧಾರ್ಮಿಕ ಸಾಂಸ್ಕೃತಿಕ ಆಚರಣೆಗಳ ಮೇಲೆ ಬಹಳ ನಂಬಿಕೊಂಡಿದ್ದರಿಂದ ತನ್ನ ಮಗಳಾದ ಸಿಮೊನ್‌ದ ಬೋವಾಳನ್ನು ಬಹಳ ಶಿಸ್ತಿನಿಂದ ನಿರ್ದಿಷ್ಟ ಚೌಕಟ್ಟಿನಲ್ಲಿ ಬೆಳೆಸಿದಳು.

ಬೋವಾ ಪ್ರಾಥಮಿಕ ಹಂತದ ವಿದ್ಯಾಭ್ಯಾಸ ಪಡೆದದ್ದು ಕ್ಯಾಥೋಲಿಕ್ ಬಾಲಕಿಯರ ಶಾಲೆಯಲ್ಲಿ, ಆಕೆಯ ಬಾಲ್ಯದಲ್ಲಿನ ಚರ್ಚ್‌ನ ವಾತಾವರಣ ಆಕೆಯನ್ನು ಚಿಂತಕಿಯಾಗಿ, ಬರಹಗಾರ್ತಿಯಾಗಿ ರೂಪಿಸಿರಬಹುದು. ಆಕೆ ವಯಸ್ಕಳಾದಾಗ ಆಕೆಯ ಸಂಬಂಧಿಕ ಜಾಕಸ್ ಚಾಂಪಿಗ್‌ನ್ಯೂಯಲ್ ನನ್ನು ವಿವಾಹವಾದಳು. ಈತ ಆಕೆಗೆ ಬಾಲ್ಯದಿಂದಲೂ ಪರಿಚಯ. ೧೯೨೬ರಲ್ಲಿ ಆಕೆ ಸೋರ್‌ಬಾನ್ ವಿಶ್ವವಿದ್ಯಾಲಯದಲ್ಲಿ ಪದವಿಗೆ ಸೇರಿದಳು. ಅಲ್ಲಿ ಸಾಹಿತ್ಯ ಹಾಗೂ ತತ್ವಜ್ಞಾನವನ್ನು ವಿಶಿಷ್ಟವಾಗಿ ಅಧ್ಯಯನ ನಡೆಸಿದಳು. ೧೯೨೯ರಲ್ಲಿ ಪದವಿಯನ್ನು ತೇರ್ಗಡೆ ಹೊಂದಿದಳು. ಈಕೆಯ ಜೊತೆಗೆ ಪ್ರಸಿದ್ಧ ತತ್ವಶಾಸ್ತ್ರಜ್ಞ, ಅಸ್ತಿತ್ವವಾದಿ ಚಿಂತಕ ಜಾನ್‌ಪಾಲ್ ಸಾರ್ತ್ ಸಹಪಾಠಿಯಾಗಿದ್ದ. ಸಾರ್ತ್ ಜೊತೆಗಿನ ಚರ್ಚೆಯ ನಂತರ ಬೋವಾಳ ಚಿಂತನಾ ಶೈಲಿ ವಿಸ್ತಾರತೆಯನ್ನು ಪಡೆಯಿತು.

ಆಕೆ ಪದವಿ ಪಡೆದು ನಂತರ ಹಲವು ಶಾಲೆಗಳಲ್ಲಿ ತತ್ವಶಾಸ್ತ್ರವನ್ನು ಬೋಧನೆ ಮಾಡಿದ್ದಳು. ಕೆಲವು ವರ್ಷಸೋರ್‌ಬಾನ್ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕಿಯಾಗಿಯೂ ಕಾರ್ಯನಿರ್ವಹಿಸಿದ್ದಳು.

೧೯೪೩ರಲ್ಲಿ ಎಲ್ ಇನ್‌ವೈಟೀ ಪ್ರಕಟಗೊಂಡಿತು. ನಂತರ೧೯೪೫ರಲ್ಲಿ ಲೆ ಸ್ಯಾಂಗ್ ಡಸ್ ಆಟ್ರೆಸ್ ರಾಜಕೀಯ ಆಸಕ್ತಿಯನ್ನು ಪ್ರಶ್ನೆ ಮಾಡುವ ಕಾದಂಬರಿ. ಡೀರ್‌ಡ್ರ್ ಬೇರ್ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ೧೯೪೬ರ ಅಕ್ಟೋಬರ್‌ನಿಂದ ೧೯೪೯ ರ ಜೂನ್‌ವರೆಗೆ ಕೃತಿಗಾಗಿ ಆಕೆ ಸಂಶೋಧನೆ ನಡೆಸಿದ್ದಾಳೆ. ೧೯೪೯ರಲ್ಲಿ ಪ್ರಕಟಗೊಂಡಿತು. ಆನಂತರ ೧೯೫೩ರಲ್ಲಿ ಇಂಗ್ಲೀಷ್ ಭಾಷೆಗೆ ಅನುವಾದವಾಯಿತು. ವಿಸ್ತೃತವಾದ ಸ್ತ್ರೀವಾದಿ ಚಿಂತನೆಯನ್ನು ವಿಶ್ವಕ್ಕೆ ಕಾಣಿಕೆಯಾಗಿ ನೀಡಿದ ಸಿಮೊನ್‌ದ ಬೋವಾಳನ್ನು ಆದಿ ಚಿಂತಕಿ ಎಂದು ಕರೆಯುವುದರಲ್ಲಿ ತಪ್ಪಿಲ್ಲ. ೧೯೫೮ರಲ್ಲಿ 'ಮೆಮೊರೀಸ್ ಡಿ ಅನ್ ಜಿಯಾನ್ ಪಿಲ್ಲೆ ರೆಂಜಿಯಲ್ಲಿ ತನ್ನ ಬಾಲ್ಯಜೀವನದ ಮಧುರ ನೆನಪನ್ನು ಚಿತ್ರಿಸಿದ್ದಾಳೆ.

ಹೀಗೆ ತನ್ನನ್ನು ತಾನು ನಿರಂತರ ಚಿಂತನೆಗೆ ಬರವಣಿಗೆಗೆ ಸಮರ್ಪಿಸಿಕೊಂಡ ಲೇಖಕಿ ಸಿಮಾನ್ ದ ಬೋವಾ. ಕ್ರಿ.ಶ. ೧೮ನೇ ಶತಮಾನಕ್ಕಿಂತ ಮುಂಚೆ ಸ್ತ್ರೀವಾದಿ ಚಿಂತಕರಿದ್ದರೂ ಸಹ ತನ್ನ ಪ್ರಭಾವಶಾಲಿ ಬರವಣಿಗೆಯಿಂದ ಸ್ತ್ರೀವಾದಕ್ಕೆ ಅಧಿಕೃತತೆಯನ್ನು ದೊರಕಿಸಿ ಕೊಟ್ಟಳು. ಸಿಮೊನ್‌ದ ಬೋವಾಳಿಗೂ ಮುನ್ನ ಲೇಡಿ ಮೇರಿ ವರ್ಟ್‌ಲಿ ಮಾಂಟೆಗೋ (೧೬೮೯-೧೭೬೨) ಮೇರಿ ವುಲ್‌ಸ್ಟನ್ ಕ್ರಾಪ್ಟ್ (೧೭೯೭ ಲೇಡಿ ಮೇರಿ ಪತ್ರಗಳು (೧೯೬೩) ಪ್ರಮುಖವಾಗಿದ್ದವು. ಮೇರಿ ವುಲ್‌ಸ್ಟನ್‌ಕ್ರಾಪ್ಟ್‌ಳ ೧೯೭೨ರಲ್ಲಿ ರಚಿಸಿದ 'ಸ್ತ್ರೀಯರ ಹಕ್ಕುಗಳ ಸಮರ್ಥನೆ'' ಪ್ರಮುಖವಾದ ಚಿಂತನೆಯಾಗಿದೆ. ವರ್ಜೀನಿಯಾ ವುಲ್ಫ್‌ಳ (೧೮೮೨-೧೯೪೧) ''ಮಿಸಸ್ ಡ್ಯಾಲೋವೇ'' '' ಟು ದ ಲೈಟ್ ಹೌಸ್'' ಕಾದಂಬರಿ ''ತನ್ನದೇ ಆದ ಸ್ವತಂತ್ರ ಕೊಠಡಿ'' ಸುದೀರ್ಘ ಪ್ರಬಂಧವನ್ನು ರಚಿಸಿದ್ದಾಳೆ.[1]

ಸ್ತ್ರೀವಾದಿ ಚಿಂತನೆಯು ಹೀಗೆ ಬೋವಾಗಿಂತ ಬಹಳ ಮುನ್ನ ಆಲೋಚನೆಯ ಕ್ರಮವಾಗಿದ್ದೀತಾದರೂ, ಬೋವಾಳ ''ದಿ ಸೆಕೆಂಡ್ ಸೆಕ್ಸ್‌ನ ರೀತಿ ವೈಜ್ಞಾನಿಕ, ಸಾಮಾಜಿಕ, ಜೈವಿಕ, ರಾಜಕೀಯ ಚಿಂತನೆಯನ್ನೊಳಗೊಂಡ ಸಿದ್ಧಾಂತದ ಮಾದರಿಯಾಗಿ ಎಷ್ಟು ಪ್ರಭಾವ ಬೀರಿದೆ ಎಂಬುದು ಆಕೆಯ ಕೃತಿಯನ್ನು ಓದಿದಾಗದ ತಿಳಿಯಲು ಸಾಧ್ಯವಿದೆ. ಡೀರ್‌ಡ್ರ್ ಬೇರ್‌ನ ಸುದೀರ್ಘ ಪ್ರಸ್ತಾವನೆಯು 'ದಿ ಸೆಕೆಂಡ್ ಸೆಕ್ಸ್' ಕೃತಿಯ ಒಟ್ಟು ಚಿಂತನೆಯನ್ನು ಮುಂದೆ ಇಡುತ್ತದೆ. ಬೋವಾಳ ಈ ರೀತಿಯ ಸಂಶೋಧನಾ ವೈಖರಿ ಇಡೀ ವಿಶ್ವಕ್ಕೆ ಮಾದರಿಯಾಗಿದೆ. 'ಸಮಸ್ಯೆಯ ಮೂಲ ಜಾಡನ್ನು ಸವಿಸ್ತಾರವಾಗಿ ಹುಡುಕಿ ತೆಗೆದಿದ್ದಾಳೆ'' ಈ ಕೃತಿ ಪ್ರೆಂಚ್ ಚಿಂತನೆಗೆ ಮಾತ್ರ ಸೀಮಿತವಾದುದಲ್ಲ. ಜಗತ್ತಿನ ಎಲ್ಲಾಮಹಿಳೆಯರ

ತುಡಿತ ಎಂದೇ ಹೇಳಲು ಸಾಧ್ಯವಿದೆ. ವ್ಯವಸ್ಥಿತ ಮಹತ್ವಾಕಾಂಕ್ಷೆಯ ಹಂಬಲ ಈ ಕೃತಿಯಲ್ಲಿ ಅಡಗಿದೆ.

ಡೀರ್‌ಡ್ರ್‌ಬೇರ್ ನೀಡುವ ಮಾಹಿತಿಯಂತೆ ಜಗತ್ತಿನಾದ್ಯಂತ ಇಪ್ಪತ್ತಾರು ಭಾಷೆಗೆ ಅನುವಾದಗೊಂಡಿವೆ. ಕೇವಲ ಇಪ್ಪತ್ತಾರು ಭಾಷೆಗೆ ಮಾತ್ರವಲ್ಲ ಮತ್ತೆ ಇಪ್ಪತ್ತಾರು ಭಾಷೆಗೆ ಎಂದು ಅನುವಾದಗೊಂಡರೂ ಹೆಚ್ಚು ಹೆಚ್ಚು ಪರಿಣಾಮವನ್ನು ಬೀರುವ ಕೃತಿ ಎಂದು ಹೇಳಬಹುದು. ಈ ಕೃತಿಯು ಬಹಳಷ್ಟು ಜನರಿಂದ ಹೊಗಳಿಸಿಕೊಳ್ಳಲ್ಪಟ್ಟಿದೆ. ಹಾಗೆಯೇ ಟೀಕೆಗೂ ಗುರಿಯಾಗಿದೆ ಆದರೂ ಇಡೀ ವಿಶ್ವದ ಎಲ್ಲಾ ಮಹಿಳೆಯರನ್ನು ಪ್ರತಿನಿಧಿಸುವ ಕೃತಿಯಾಗಿದೆ. ಬೋವಾ ಹುಡುಕಾಟ ಮಾಡಲು ಆರಂಭಿಸಿದ್ದು ಹೆಣ್ಣು ಎಂದರೆ ಏನು? ಯಾರು ? ಹೇಗೆ ಆಕೆ ಅನ್ಯಳಾಗಿದ್ದಾಳೆ. ಜೈವಿಕವಾದ ಭಿನ್ನತೆ, ಸಾಮಾಜಿಕ ಒತ್ತಡಗಳು, ರಾಜಕೀಯ ಒತ್ತಡಗಳು ಏನೆಂಬುದನ್ನು ಸ್ತ್ರೀತ್ವ, ಸ್ತ್ರೀವಾದ, ಸ್ತ್ರೀ ನಿಷ್ಠ ಚಿಂತನೆ ಇವುಗಳ ಬಗ್ಗೆ ತಾನೇ ಪ್ರಶ್ನಿಸಿಕೊಳ್ಳುತ್ತಾ ಉತ್ತರವನ್ನು ಕಂಡು ಹಿಡಿಯುವ ಕಾರ್ಯ ಕೈಗೊಂಡಿದ್ದಾಳೆ.

''ಪ್ರಶ್ನೆಗಳು ಹೊಸವಲ್ಲ, ಅಲ್ಲದೇ ಅವುಗಳಿಗೆ ಹಲವು ಬಾರಿ ಉತ್ತರವನ್ನು ನೀಡಲಾಗಿದೆ. ಗಂಡಸರು ಹೆಂಗಸರ ಸ್ಥಾನಮಾನಗಳ ಬಗ್ಗೆ ಏನೇ ಸಮರ್ಥನೆಯನ್ನು ನೀಡುತ್ತಾ ಬಂದಿದ್ದರೂ ಆಕೆಯು ಅನ್ಯಳಾಗಿಯೇ ಉಳಿದಿದ್ದಾಳೆ'' ಎಂದು ಬೋವಾ ಅಭಿಪ್ರಾಯ ಪಡುತ್ತಾಳೆ. ನಿರಂತರ ಹುಡುಕಾಟ, ಆ ಹುಡುಕಾಟಕ್ಕೆ ಪ್ರತಿಫಲ ಈ ಎಲ್ಲಾ ಕ್ರಿಯೆಗಳು ನಿರಂತರವಾಗಿ ನಡೆಯುತ್ತಿದ್ದರೂ ಹೆಣ್ಣಿಗೆ ಮತ್ತೆ ಮತ್ತೆ ಹುಡುಕಾಟ ಮಾಡುವ ಸಂದರ್ಭಗಳು ಎದುರಾಗುತ್ತಲೇ ಇವೆ.

''ಜೀವಶಾಸ್ತ್ರದ ಮಾಹಿತಿ''ಯನ್ನು ಬೋವಾ ನೀಡುತ್ತಾ ಪ್ರಕೃತಿಯಲ್ಲಿರುವ ಬಹುರೂಪಿ ಜೀವಿಗಳ ಬಗ್ಗೆ ಮಾಹಿತಿ ನೀಡಿದ್ದಾಳೆ. ವಂಶಾಭಿವೃದ್ಧಿಯ ವಿಧಾನ ಹಾಗೂ ಹೆರುವ ವಿಧಾನದಲ್ಲಿ ಹೆಣ್ಣು/ಗಂಡು ನಿಯೋಗಿ, ಅನುಭೋಗಿಯಾಗಿ ಒಬ್ಬರನೊಬ್ಬರು ಅವಲಂಬಿಸಿದ್ದರೂ ಹೆಣ್ಣು ಹೇಗೆ ಶೋಷಣೆಗೊಳಗಾಗುತ್ತಾಳೆ ಎಂಬುದನ್ನು ವಿವರವಾಗಿ ಚಿತ್ರಿಸಿದ್ದಾಳೆ. 'ಹೆಣ್ಣು ಗರ್ಭಾಶಯ - ಅಂಡಾಶಯ' ಎಂಬ ಮಾತಿನ ಬಗ್ಗೆ ಸುದೀರ್ಘವಾದ ಚರ್ಚೆ ಸಾಧ್ಯವಾಗಿದೆ. ಸಿಮೊನ್ ದ ಬೋವಾ 'ದಿ ಸೆಕೆಂಡ್ ಸೆಕ್ಸ್' ಕೃತಿಯಲ್ಲಿ ಚರ್ಚೆಮಾಡಿರುವ ವಿಷಯದ ಮೇಲೆ ಆಕೆಯ ಪರಿಚಯದ ಜೊತೆ ಪ್ರಮುಖ ಅಂಶಗಳ ಮೇಲೆ ಈ ಅಧ್ಯಾಯದಲ್ಲಿ ಚರ್ಚಿಸುವ ಪ್ರಯತ್ನ ಮಾಡಿದ್ದೇನೆ.

ಪ್ರಕೃತಿ ಏಕರೂಪವಾದುದಲ್ಲ, ಫ್ಯುಸೊರಿಯಾದಿಂದ ಹಿಡಿದು ಮಾನವನವರೆಗೂ ಸಂತಾನೋತ್ಪಾದನೆ ಅದರ ವಿಶಿಷ್ಟತೆ ಹೆಣ್ಣು / ಗಂಡುಗಳು ಪಾಲ್ಗೊಳ್ಳುವ ವಿಧಾನವನ್ನು ವೈಜ್ಞಾನಿಕ ಮಾಹಿತಿಯನ್ನು ಬೋವಾ ನೀಡಿದ್ದಾಳೆ. 'ವೀರ್ಯಾಣು ಮತ್ತು ಅಂಡಾಣುಗಳು' ಎಂಬ ಎರಡು ಸಂತಾನೋತ್ಪಾದನೆಯಲ್ಲಿ ಅಗತ್ಯವೆಂದ ಮಾತ್ರಕ್ಕೆ ಗಂಡು ಹೆಣ್ಣು ಎಂಬ ಎರಡು ಲಿಂಗಗಳು ಸಿಧ್ಧವಾಗಿ ಬಿಡುತ್ತವೆ ಎಂಬುದು ತಪ್ಪು ಅದನ್ನು ಸಾಬೀತು ಮಾಡಲು ಸಾಧ್ಯವಿಲ್ಲ' ಎಂಬುದನ್ನು ಬೋವಾ ಸ್ಪಷ್ಟವಾಗಿ ವಿವರಿಸಿದ್ದಾಳೆ. ಲಿಂಗಬೇಧ ಎನ್ನುವುದು ಆಕಸ್ಮಿಕವೇ, ಅನಿವಾರ್ಯತೆಯೇ, ಸಿದ್ಧಸ್ಥಿತಿಯೇ ಎಂಬುದರ ಚರ್ಚೆ ಅಗತ್ಯವಿದೆ. ಅಂಡಾಣು, ವೀರ್ಯಾಣುಗಳು ಜೈವಿಕವಾಗಿ ವಿವರಿಸಿಕೊಳ್ಳುವ ಕ್ರಮವೆಂದೆ ತಿಳಿಯಬಹುದು.

ಆದಿಮ ಸ್ತ್ರೀವಾದಿ ಚಿಂತಕಿ ಎಂದು ಬೋವಾಳನ್ನು ಕರೆಯಬೇಕಾದರೆ ಆಕೆ ಸ್ತ್ರೀವಾದಕ್ಕೆ ನೀಡಿದ ಹೊಸ ಆಯಾಮವೇ ಕಾರಣ. ಅವುಗಳನ್ನು ನಾವು ಮುಂದಿನ ಭಾಗದಲ್ಲಿ ಚರ್ಚೆ ನಡೆಸೋಣ. ಸ್ತ್ರೀವಾದಿ ಚಿಂತನೆಗೆ ಬೋವಾಳ 'ದಿ ಸೆಕೆಂಡ್ ಸೆಕ್ಸ್' ' ಆಧಾರಸ್ತಂಭ' ಎಂದೇ ಹೇಳಬಹುದು. ಮಾನವ ಚರಿತ್ರೆಯಿಂದ ಸ್ತ್ರೀವಾದದೆಡೆ ಚಲಿಸಿದ ಕದನ ಎಂದು ವಿವರಿಸಬಹುದು. ತನ್ನತನದ ಎಲ್ಲವನ್ನು ಆಕ್ರಮಿಸುವ ಪುರುಷತ್ವದ ಬಗೆಗಿನ ಖಂಡನೆಯನ್ನು ಈ ಕೃತಿಯಲ್ಲಿ ಕಾಣಲು ಸಾಧ್ಯವಿದೆ. ಸ್ತ್ರೀ ಅಪೂರ್ಣಳೆಂಬ ಸಂಕಥನದ ಬಗೆಗಿನ ವಿರೋಧವನ್ನು ಪ್ರಬಲವಾಗಿ ಬೋವಾ ಮಾಡಿದ್ದಾಳೆ. ಮಾನವೀಯತೆಯನ್ನು ನೈಜವಾಗಿ ಅರ್ಥೈಸಿಕೊಳ್ಳುವ ಕ್ರಮವನ್ನು ಈ ಕೃತಿಯು ಸಾರುತ್ತದೆ. ಆತ್ಮಸಾಕ್ಷಿಯಾಗಿ ನ್ಯಾಯಸಮ್ಮತವಲ್ಲದ ಸ್ಥಿತಿಯ ಬಗೆಗಿನ ಅಸಹನೆಯನ್ನು ಸಾರುವ ಕೃತಿ. ಅಸಾಧ್ಯವೆಂದು ತಿಳಿದಿದ್ದ ತುಲನಾತ್ಮಕತೆಗೆ ತೀವ್ರತೆ ತೋರಿದ ಕೃತಿ ಬೋವಾಳದ್ದಾಗಿದೆ.

"Women are not born 'feminine' but shaped by a thousand external processes" - ಮನುಷ್ಯರಾಗಿ ಭೂಮಿಯಲ್ಲಿ ಜನ್ಮತಳೆದ ನಂತರ ಹೆಣ್ಣು, ಗಂಡು ಎಂಬ  ವಿಭಜನೆಯಾಗಿದೆ ಎಂಬ ಮಾತನ್ನು ಹೇಳುತ್ತಾ ಹೆಣ್ಣಾಗಿ ಯಾರು ಹುಟ್ಟುವುದಿಲ್ಲ ಹೆಣ್ಣಾಗಿ ಮಾರ್ಪಡುತ್ತಾರೆ ಎಂಬ ವಾದವನ್ನು ಮಾಡುತ್ತಾಳೆ. ಲೋಕದಲ್ಲಿ ಜೀವಿಯಾಗಿ ಜನಿಸಿದ ಮೇಲೆ ಸಾಮಾಜಿಕ, ರಾಜಕೀಯ, ಜೈವಿಕ ಒತ್ತಡಗಳು ನೀನು ಹೆಣ್ಣೆಂದು ಹೆಣ್ಣಗಿರುವ ನಿರ್ದಿಷ್ಟ ಚೌಕಟ್ಟಿನ ಜೀವನವನ್ನು ನಡೆಸಬೇಕೆಂಬ ನಿಯಮವನ್ನು

ತಿಳಿಸಿದಾಗ ಒತ್ತಾಯಪೂರ್ವಕವಾಗಿ ಅನುಸರಿಸಲೇ ಬೇಕಾದ ದುಃಸ್ಥಿತಿ ಒದಗಿ ಬರುತ್ತದೆ. ಆಗ ಜೀವಿಯ ಮೇಲೆ ಮಾಡುವ 'ಆರೋಪ'ದ ಫಲವಾಗಿ ಹೆಣ್ಣುಗಂಡುಗಳೆಂಬ ಬೇರೆ ಬೇರೆ ರೀತಿಯಾದ ಲಿಂಗಗಳೂ ವಿಭಜನೆಯಾಗುತ್ತದೆ. ಆ ವಿಭಜನೆಯ ಕಾರಣದಿಂದ 'ಹೆಣ್ಣು' ಎಂಬುದು ಅನ್ಯಲಿಂಗವೆಂದು ಅರಿವಿಲ್ಲದೆಯೇ ಆಗಿಹೋಗುವ ಸಾಧ್ಯತೆಗಳು ನಮ್ಮ ಜೊತೆಯಿವೆ.

ಎಲ್ಲಾ ಹೋರಾಟಗಳ ಹಿನ್ನೆಲೆಯಲ್ಲಿ ಮನಸ್ಸು ಬಹಳ ಪ್ರಮುಖವಾದ ಕಾರ್ಯ ನಿರ್ವಹಿಸುತ್ತದೆ. ಮಾನಸಿಕವಾದ ಪೂರ್ವಸಿದ್ಧತೆಯು ಹೇಗೆ ನಿರ್ದೇಶಿಸುತ್ತದೆಯೋ ಹಾಗೆ ನಡೆದುಕೊಂಡು ಹೋಗುತ್ತದೆ. ಏನೇ ಘಟನೆಗಳು ಘಟಿಸಬೇಕಾದರೂ ಮೂಲ ಕಾರಣ ಮನಸ್ಸು ಫ್ರಾಯ್ಡ್ ಮತ್ತು ಆಡ್ಲರ್‌ನ ಚಿಂತನೆಯನ್ನು ಬೋವಾ ಬಳಸಿಕೊಂಡು ಮಾನಸಿಕವಾಗಿ ಯಾವ ರೀತಿ ಪರಿಣಾಮಗಳುಂಟಾಗುತ್ತದೆ ಎಂಬುದನ್ನು ಚರ್ಚಿಸಿದ್ದಾಳೆ. ಮನಸ್ಸು ಮತ್ತು ದೇಹದ ಬಗ್ಗೆ ಬೋವಾ ಚರ್ಚೆ ಮಾಡುತ್ತಾ ದೇಹದ ಬೆಳವಣಿಗೆ ಮನಸಿನ ಮೇಲೆ ಉಂಟುಮಾಡುವ ಪರಿಣಾಮವು ವ್ಯವಸ್ಥೆಯ ಒಂದು ಭಾಗವೆಂದೇ ಹೇಳಬಹುದು.

ಹೆಣ್ಣಾಗಿ ಮಾರ್ಪಡುವ ರಚನೆಯಲ್ಲಿ ದೇಹದಲ್ಲಿ ಉಂಟಾಗುವ ಬದಲಾವಣೆ ಮನಸಿನ ಮೇಲೆ ಬಹಳ ಪರಿಣಾಮಕಾರಿಯಾದುದು. ತನ್ನಲ್ಲಾಗುವ ಬದಲಾವಣೆ ಮನಸಿನಲ್ಲಿ ಒಂದು ತಲ್ಲಣವನ್ನು ಉಂಟು ಮಾಡುತ್ತದೆ. ಬಾಲ್ಯದಿಂದಲೂ ಈ ರೀತಿಯ ಪ್ರಕ್ರಿಯೆ ಸಹಜವಾದುದು. ಕುತೂಹಲ, ಬದಲಾವಣೆಯಾಗುವ ಸಂದರ್ಭ, ಪ್ರಕೃತಿಯಲ್ಲಿ ತೀರ ಸಹಜವಾದುದಾದರೂ ಆ ವ್ಯತ್ಯಾಸವೇ ಹೆಣ್ಣಾಗಿ ಮಾರ್ಪಡುವ ಸಂದರ್ಭದಲ್ಲಿ ತೀರಾ ಅನಿವಾರ್ಯವಾಗಿ ಸಾಧ್ಯವಾಗಿದೆ.

ಹುಟ್ಟು, ಬೆಳವಣಿಗೆ, ಬಾಲ್ಯ, ಯೌವ್ವನ, ಮುಪ್ಪು ಈ ಘಟ್ಟಗಳು ಸಹಜವಾದುದು ಅಲ್ಲಿ ಆಗುಹೋಗುಗಳ ದೈಹಿಕವಾದ ಬದಲಾವಣೆ, ಮನಸ್ಸಿನ ಮೇಲೆ ಬಹಳ ಪರಿಣಾಮಕಾರಿಯಾದದ್ದು. ಕೇವಲ ದೈಹಿಕವಾದ ಬದಲಾವಣೆ ಮಾತ್ರವಲ್ಲ ಕೆಲವು ನಿರ್ದಿಷ್ಟ ಸಂದರ್ಭಗಳು ಮನುಷ್ಯನನ್ನು ಕುಗ್ಗಿಸುತ್ತದೆ. ಹೆಣ್ಣು ಆಕೆಗೆ ಅರಿವಿಲ್ಲದಂತೆಯೆ ಹೆಣ್ಣೆಂಬ ಆರೋಪವನ್ನು ಹೇರಿಕೊಂಡು ತನ್ನೊಳಗೆ ನಿರ್ದಿಷ್ಟ ಮಿತಿಯನ್ನು ಹಾಕಿಕೊಳ್ಳುವ ಸಂದರ್ಭವನ್ನು ನಾವು ಈ ಮೂಲಕ ಗ್ರಹಿಸಲು ಸಾಧ್ಯವಿದೆ ಹೀಗೆ ಮಾನಸಿಕವಾದ

ತಲ್ಲಣಗಳು. ಆತಂಕಗಳು ಗ್ರಹಿಸಲು ಸಾಧ್ಯವಾಗಿರುವುದಕ್ಕೆ ಬೋವಾಳ ದಿ ಸೆಕೆಂಡ್ ಸೆಕ್ಸ್ ಕೃತಿ ಹೆಚ್ಚು ಸಹಾಯಕವಾಗಿದೆ.

ಹೀಗೆ ಮುಂದೆ ಸಾಗುತ್ತಾ ಚಾರಿತ್ರಿಕವಾಗಿ ಹೆಣ್ಣನ್ನು ಗ್ರಹಿಸುವ ಪ್ರಯತ್ನ ಮಾಡುವುದಾದರೆ ಹೆಣ್ಣು ಚರಿತ್ರೆಯಲ್ಲಿ ಪುರುಷಪ್ರಧಾನ ನೆಲೆಯಲ್ಲಿ ಮನಬಂದಂತೆ ಚಿತ್ರಿತವಾಗಿರುವ ಉದಾಹರಣೆಗಳು ಸಾಕಷ್ಟು ಇವೆ. ಘಟಿಸಿಹೋದುದೆಲ್ಲ ಚರಿತ್ರೆ, ಇಂದು ನಡೆಯುತ್ತಿರುವುದಲ್ಲ ಮುಂದೆ ಚರಿತ್ರೆಯಾಗಿ ಪು ಟ ಸೇರುತ್ತದೆ. ಆರ್ಥಿಕತೆಯ ಯಶಸ್ಸು ಸಾಧಿಸುವುದಕ್ಕಾಗಿ ದುಡಿಮೆ ಅನಿವಆರ್ಯವೂ ಅಗತ್ಯವೂ ಆದರೂ ಹೆಣ್ಣುಗಂಡು ಎಂಬ ಬೇಧವಿಲ್ಲದೆ ದುಡಿಮೆಯಲ್ಲಿ ತೊಡಗಿದ್ದರು. 'ಹೆಣ್ಣು ಪುರುಷನಿಗಿಂತ ಕಡಿಮೆ ಬಲ ಉಳ್ಳವಳೆಂಬ ಕಾರಣಕ್ಕಾಗಿ ಆಕೆ ಮನೆಯಲ್ಲಿ ಉಳಿಯಬೇಕಾಯಿತು. ಮನೆಯ ದುಡಿಮೆಯಲ್ಲಿ ಸಮಪಾಲಿದ್ದರೂ ಹೆಣ್ಣು ಮನೆಯಲ್ಲಿರುವವಳು. ವ್ಯರ್ಥವಾಗಿ ಕಾಲ ಕಳೆಯುವವಳು ಪುರುಷರು ಹೊರಗೆ ದುಡಿಮೆಯನ್ನು ಮಾಡಿ ಬರುವ ಹೊಣೆ ಹೊತ್ತಿರುವವರು ಎಂಬ ಮಾತು ಕೇವಲ ನಿರ್ದಿಷ್ಟ ಪ್ರದೇಶಕ್ಕೆ ಮೀಸಲಾದುದಲ್ಲ. ಆದಿಮಾನವನ ಕಾಲದಿಂದಲೂ ಈ ಆರೋಪವಾಗಿಯೇ ಮುಂದೆ ಸಾಗಿದೆ.

ಈ ಸಂದರ್ಭವನ್ನು ಪ್ರಸ್ತುತಗೊಳಿಸಿ ಹೇಳುವುದಾದರೆ ಚರಿತ್ರೆಯಲ್ಲಿ ಹೆಣ್ಣು ನಡೆದು ಬಂದ ಹಾದಿಗೆ ವ್ಯತಿರಿಕ್ತವಾದ ಸಂದರ್ಭಗಳು ಎದುರಾಗಿವೆ. ಹೆಣ್ಣೆಂದರೆ ಹೀಗಿರಬೇಕು. ಆಕೆ ನಾಲ್ಕುಗೋಡೆಗಳ ಮಧ್ಯೆ ಜೀವನ ಸಾಗಿಸಬೇಕೆಂಬ ಸಂದರ್ಭ ಇಂದು ಬದಲಾಗಿ. ಜಾಗತೀಕರಣ, ಖಾಸಗೀಕರಣ, ಉದಾರೀಕರಣ, ನಗರೀಕರಣ ಈ ಎಲ್ಲಾ ಸಂದರ್ಭಗಳು ಹೆಣ್ಣಿಗೆ ಹೊಸಹಾದಿಯನ್ನು ತೆರೆದಿದೆ. ಜೊತೆಗೆ ಆರ್ಥಿಕವಾಗಿ ಯಶಸ್ಸು ಸಾಧಿಸಬೇಕಾದರೆ ಇಬ್ಬರು ದುಡಿಯಬೇಕೆಂಬ ಅನಿವಾರ್ಯತೆ ಸಹಜವಾಗಿಯೇ ಇದೆ. ಎಲ್ಲಾ ಕ್ಷೇತ್ರಗಳಲ್ಲಿ ಹೆಣ್ಣು ಸಾಧನೆಯನ್ನು ಮಾಡಿದ್ದಾಳೆ. ತನ್ನನ್ನು ತಾನು ಸಮರ್ಪಕವಾಗಿ ಬಳಸಿಕೊಂಡಿದ್ದಾಳೆ. ಎಲ್ಲಾ ಹೋರಾಟಗಳಿಗೂ ಸಂಘಟನೆ ಅಗತ್ಯ. ಈ ರೀತಿ ಒಟ್ಟಾಗಿ ಸೇರುವ ಅವಕಾಶ ಆಕೆಗೆ ದೊರೆತದ್ದೇ ತನ್ನತನ, ಸ್ತ್ರೀತ್ವ, ಸಮಾನತೆಯ ಆಶಯ ಇವುಗಳ ಬಗ್ಗೆ ಚಿಂತನೆ ಮಾಡುವುದಕ್ಕೆ ಸಹಾಯಕವಾಯಿತು.

''ಶೋಷಣೆ'' ಎಂಬುದು ಕೇವಲ ಹೆಣ್ಣಿಗೆ ಸೀಮಿತ ಮಾತ್ರವಲ್ಲ. ಬೇರೆ ಬೇರೆ ವರ್ಗಗಳಲ್ಲಿ ನೊಂದವರು ತುಳಿತಕ್ಕೆ ಒಳಗಾದವರನ್ನು ನಡೆಸಿಕೊಳ್ಳುವ ಒಂದು ವಿಧಾನ.[2]

ಬೋವಾ ಅಭಿಪ್ರಾಯ ಪಡುವಂತೆ ಕೇವಲ ಹೊರಗೆ ದುಡಿಮೆ ಮಾಡುವುದಷ್ಟೇ ಆ ಹೆಣ್ಣಿನ ಕೆಲಸವಲ್ಲ. ಜೊತೆಗೆ ವಂಶೋತ್ಪಾದನೆ ಸಹ ಅಷ್ಟೇ ಮುಖ್ಯವಾದುದು ಎಂದು ಅಭಿಪ್ರಾಯ ಪಡುತ್ತಾಳೆ. ''ನೇಗಿಲು ಉಳುವುದಕ್ಕಿಂತ ಮಕ್ಕಳನ್ನು ಹೆರುವುದು ಬಹಳ ಮುಖ್ಯವೆಂಬ ಅಭಿಪ್ರಾಯ'' ವನ್ನು ಚಿಂತಿಸುವ ಅಗತ್ಯವಿದೆ. ಹೆಣ್ಣು ಇರುವುದು ಹೊರುವುದಕ್ಕಾಗಿ, ಹೆರುವುದಕ್ಕಾಗಿ ಎಂಬ ಹಗುರವಾದ ಮಾತನ್ನು ನಾವು ಚಿಂತಿಸಬೇಕಾದ ಅಗತ್ಯವಿದೆ.

ಹೆರುತ್ತಿರುವ ಹೆಂಗಸಿಗೆ ತನ್ನ ಸೃಷ್ಟಿ ಸಾಮರ್ಥ್ಯದ ಬಗೆಗೆ ಹೆಮ್ಮೆ ಇರಬೇಕು. ಲೋಕಕ್ಕೆ ಹೊಸಜೀವಿಯನ್ನು ತರುತ್ತಿದ್ದೇವೆ ಎಂಬ ಹೆಮ್ಮೆ ಇರಬೇಕು. ಅದನ್ನು ಹೊರತು ಪಡಿಸಿ ತನ್ನ ಸಾಮರ್ಥ್ಯದ ಬಗ್ಗೆ ಕೀಳರಿಮೆ ಇರಬಾರದು. ಆ ರೀತಿಯ ಮನೋಭಾವ ಹೆಣ್ಣನ್ನು ಮತ್ತೆ ಮತ್ತೆ ಕುಗ್ಗಿಸುತ್ತಾ ಹೋಗುತ್ತದೆ. ಹೆಣ್ಣಿನ ಶ್ರಮ ವ್ಯರ್ಥವಾದುದಲ್ಲ. ಆಕೆಯ ಶ್ರಮಕ್ಕೆ ಸಾರ್ಥಕತೆ ಹೊಂದುವ ಶಕ್ತಿ ಇದೆ ಎಂಬುದನ್ನು ಈ ಮೂಲಕ ಮನವರಿಕೆ ಮಾಡಿಕೊಳ್ಳಬೇಕು. ಗಂಡಿಗೆ ತಾಯ್ತನದ ಅನುಭವ ಪಡೆಯುವ ಸಾಧ್ಯತೆಯಿಲ್ಲ. ಆದ್ದರಿಂದ ಆ ಸುಪ್ತ ಭಾವವನ್ನು ಹೆಣ್ಣಿನ ಮೇಲೆ ಶೋಷಣೆ ಮಾಡುವಂತೆ ತೀರಿಸಿಕೊಂಡು ಬಂದಿರುವ ಸಾಧ್ಯತೆ ಇದೆ.

ಸಾಮಾಜಿಕವಾದ ಚಿಂತನೆಯೊಟ್ಟಿಗೆ ಪಿತೃಪ್ರಧಾನ ವ್ಯವಸ್ಥೆ ಹೇಗೆ ಬೆರೆತು ಹೋಗಿದೆ ಎಂಬ ಆಲೋಚನೆಯ ಕ್ರಮ ಬಹಳ ಮುಖ್ಯವಾದುದು. ಪುರುಷರೆಲ್ಲರೂ ಪುರುಷ ಮನೋಭಾವ ಹೊಂದಿರುವುದಿಲ್ಲ. ಸ್ತ್ರೀಯರೆಲ್ಲರೂ ಸ್ತ್ರೀಯಪರವಾದ ಮನಸ್ಥಿತಿ ಹೊಂದಿರಲು ಸಾಧ್ಯವಿಲ್ಲ. ಅಪ್ರಜ್ಞಾಪೂರ್ವಕವಾಗಿ ಪರಂಪರೆಯಲ್ಲಿ ಹರಿದು ಬಂದ ಮಾನಸಿಕ ಒತ್ತಡ ತಳಮಳಗಳನ್ನು ಹೇರಿಕೆಯಾಗಿ ಮಾರ್ಪಡಿಸಿ ಸಮಾಜದಲ್ಲಿ ಒಂದೆಡೆ ಬದುಕುತ್ತಿದ್ದ ಮನುಷ್ಯರೆಲ್ಲರು, ಆದರೆ ಅಧಿಕಾರ, ಆಸ್ತಿಯ ಒಡೆತನ, ನ್ಯಾಯಪದ್ಧತಿ, ಪ್ರಮುಖ ಸ್ಥಾನಗಳು ಎಲ್ಲವೂ ಪುರುಷನ ಪರವಾಗಿತ್ತು. ಅಸಮಾನತೆಯ ಸುಳಿಯಲ್ಲಿ ಹೆಣ್ಣು ಗಂಡುಗಳು ಎಂಬ ಬೇಧವು ಅಸಹಜವಾಗಿದ್ದಂತಹ ಸ್ಥಿತಿ. ಆ ಸಂದರ್ಭಗಳು ಹೆಣ್ಣನ್ನು ಇಕ್ಕಟ್ಟಿನ ಸ್ಥಿತಿಗೆ ತಳ್ಳುತ್ತಿದ್ದವು. ಈ ಸಂದರ್ಭದಲ್ಲಿ ಅನಿವಾರ್ಯವಾಗಿ ಸಮತೋಲನದ ವಿರುದ್ಧ ಧನಿಯೆತ್ತುವ ರೀತಿಯು ಸರ್ವೇಸಾಮಾನ್ಯ. ಇದು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗದೆ ನಿರಂತರವಾಗಿ ಎಲ್ಲಾ ಒತ್ತಡಗಳ ಹಿನ್ನೆಲೆಯಲ್ಲಿ ಸಂಭವನೀಯ ಸ್ಥಿತಿಯಾಗಿ ಮಾರ್ಪಡುವುದು ಎನ್ನಬಹುದು.

"ಬಾಲ್ಯದಲ್ಲಿ ತಂದೆ ತಾಯಿಯ ಆಶ್ರಯದಲ್ಲಿ, ಯೌವ್ವನದಲ್ಲಿ ಗಂಡನ ಆಶ್ರಯದಲ್ಲಿ, ಮುಪ್ಪಿನಲ್ಲಿ ಮಕ್ಕಳ ಆಶ್ರಯ ಪಡೆದು ಹೆಣ್ಣು ಜೀವಿಸಬೇಕು" ಎಂಬ ನಿಯಮ ಹೆಣ್ಣನ್ನು ನಿರ್ದಿಷ್ಟ ಚೌಕಟ್ಟಿನಲ್ಲೇ ಇಡುವಂತೆ ಮಾಡುತ್ತದೆ. ಆಕೆಯ ಅಸ್ಥಿತ್ವವೇ ಇಲ್ಲದಂತಹ ಸ್ಥಿತಿಯು ಹೆಣ್ಣಿನ ಮನಸ್ಸಿನಲ್ಲಿ ತಲ್ಲಣವನ್ನು ತರುತ್ತದೆ. ಆಶ್ರಯ ಎನ್ನುವ ಸ್ಥಿತಿ ಅಗತ್ಯವಾದರೂ ಅದು ಹೇರಿಕೆಯಾಗಬಾರದು. ಸ್ವತಃ ಸ್ವತಂತ್ರಕ್ಕೆ ಧಕ್ಕೆಉಂಟಾಗುವ ಸಂದರ್ಭ ಕೇವಲ ಹೆಣ್ಣನ್ನಷ್ಟೇ ತಲ್ಲಣಗೊಳಿಸದು. ಇಡೀ ವ್ಯವಸ್ಥೆಯ ತಲ್ಲಣವಾಗುವುದು.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ತೀರಾ ಇಕ್ಕಟ್ಟಿನ ಪರಿಸ್ಥಿತಿಗೆ ಸಿಲುಕಿದಾಗ ಮನುಷ್ಯತ್ವ, ಮಾನವ ಸಂಬಂಧಗಳಲ್ಲಿ ವಿಪರೀತ ಅಸಹಜತೆ ಉಂಟಾಗಿ ತೀರಾ ಅಸಮತೋಲನ ಉಂಟಾಗುವ ಸಾಧ್ಯತೆ ಇರುತ್ತದೆ. ಈ ರೀತಿಯ ಸಂದರ್ಭಗಳು ಸಮಾಜದಲ್ಲಿ ಅರಿವಿಗೆ ಬಾರದಷ್ಟು ಬೆರೆತು ಹೋಗಿರುತ್ತದೆ. ಅಸಮಾನತೆ ಎಲ್ಲಿಂದ ಉಂಟಾಗಿದೆ ಎಂಬ ಮೂಲ ಜಾಡನ್ನು ಹಿಡಿಯಲಾರದಷ್ಟು ಸಂದಿಗ್ಧ ವಾತಾವರಣ ಹೇಳಲಾರದಷ್ಟು ಕಿರಿಕಿರಿಯನ್ನು ತಂದೊಡ್ಡಿರುತ್ತದೆ. ಈ ರೀತಿಯ ಸಂದರ್ಭಗಳು ಸಂಬಂಧಗಳು ಮಾನವೀಯ ಮೌಲ್ಯಗಳನ್ನು ವಿಕಾರ ಸ್ಥಿತಿಗೆ ತಲುಪುವಂತೆ ಮಾಡುತ್ತದೆ. ಮನುಷ್ಯರೆಲ್ಲರೂ ಒಂದೇ ಎನ್ನುವಂತಹ ಮೂಲತನದ ತತ್ವವನ್ನು ಈ ರೀತಿಯಾಗಿ ಗ್ರಹಿಸಲು ಸಾಧ್ಯವಿದೆ.

ಧಾರ್ಮಿಕ ಒತ್ತಡಗಳು ಹೆಣ್ಣನ್ನು ಸಂಧಿಗ್ಧ ಸ್ಥಿತಿಗೆ ತಳ್ಳುತ್ತದೆ. ಆಯಾ ಧರ್ಮದ ಪರಿಸ್ಥಿತಿಗೆ ಅನುಗುಣವಾಗಿ ಹೆಣ್ಣು ತೊಂದರೆಗೊಳಗಾಗುವ ಬಗ್ಗೆ, ಮೂಢ ಆಚರಣೆಗಳ ಬಗ್ಗೆ ಮಾತನಾಡದಷ್ಟು ಮೂಕವಾಗಿದ್ದ ಸ್ಥಿತಿಗೆ ಮಾತನಾಡುವ ಚೈತನ್ಯ, ಸ್ಥೈರ್ಯ, ಆ ಕೊರತೆಗಳ ಬಗೆಗಿನ ಚಿಂತನೆ ನಡೆಸುವ ಮನಸ್ಸನ್ನು ತಂದುಕೊಟ್ಟಿದ್ದು ಸತತ ಹೋರಾಟದ ಫಲ ಎಂದೇ ಹೇಳಬಹುದು. ಮಾನವ ಚರಿತ್ರೆಯಲ್ಲಿ ನಲುಗಿದಾಗ ಅನ್ಯಲಿಂಗವೆಂದಾದ ನಿರ್ದಿಷ್ಟ ಚೌಕಟ್ಟಿಗೆ ಮೀಸಲಾದ ಸಂದರ್ಭಗಳು ಹೆಣ್ಣಿನ ಮನಸ್ಸಿನ ತುಡಿತ ಅಭಿವ್ಯಕ್ತಿಸಲು ಸಾಧ್ಯವಿಲ್ಲದ ರೀತಿ ಸಂದರ್ಭಗಳು ಬಹಳ ಮುಖ್ಯವಾಗುವ ಸಂದರ್ಭಗಳ ಬಗೆಗೆ ಕಣ್ಣು ಹರಿಸಿದ್ದು ವಿಶಿಷ್ಟವಾದ ಸಂಗತಿ.

ಸೈದ್ಧಾಂತಿಕವಾಗಿ ಒಂದು ಚಿಂತನೆಯ ಕ್ರಮ ಆರಂಭವಾದ ಮೇಲೆ ಹೆಣ್ಣು ಆಕೆಯ ಸ್ಥಾನಮಾನ, ಅವಳೆದುರಿಸುವ ಸಂದರ್ಭಗಳು ಬದಲಾದವು. ಆರ್ಥಿಕತೆ ಎನ್ನುವುದು

ಮನುಷ್ಯ ಜೀವನದಲ್ಲಿ ಬಹಳ ಪ್ರಾಮುಖ್ಯತೆ ಪಡೆದಿದೆ ಎಂಬ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯ ಹೆಣ್ಣಿನ ಅಸಹಾಯಕತೆಗೆ ಮುಖ್ಯ ಕಾರಣ ಆರ್ಥಿಕತೆ ಎಂದು ಹೇಳಿದರೆ ತಪ್ಪಾಗಲಾರದು.

ಬೋವಾಳ ಅಭಿಪ್ರಾಯದಂತೆ ಹೆಂಗಸರ ಮೂಲಭೂತ ಸಮಸ್ಯೆ ವಂಶೋತ್ಪಾದನೆ ಮತ್ತು ಉತ್ಪಾದಕ ದುಡಿಮೆಗಳ ನಡುವೆ ಹೊಂದಾಣಿಕೆ ಮಾಡಿಕೊಳ್ಳುವುದು. ''ಚರಿತ್ರೆಯ ಆರಂಭದಿಂದಲೂ ಹೆಂಗಸನ್ನು ಮನೆಕೆಲಸಕ್ಕೆ ಕಟ್ಟಿ ಹಾಕಿ ಲೋಕ ನಿರ್ಮಾಣದಲ್ಲಿ ತೊಡಗದಂತೆ ಮಾಡಿದ್ದು ಅವಳ ಈ ವಂಶೋತ್ಪಾದನೆಯ ಹೊಣೆಗಾರಿಕೆ ತಾನೆ ? ಸಂತಾನೋತ್ಪತ್ತಿಯ ಜವಾಬ್ದಾರಿಯ ನೆಪವೊಂದನ್ನು ಮುಂದಿಟ್ಟು ಆಕೆಯನ್ನು ಗೃಹ ಬಂಧನದಲ್ಲಿರಿಸಿದಂತೆ ಸ್ಥಿತಿಗೆ ತೀರಾ ವಿರೋಧವು ವ್ಯಕ್ತವಾಗಿದೆ. ಕುಮಾರಿಯಾದಾಗಿನಿಂದ ಋತುಬಂಧವಾಗುವವರೆಗೂ ಆಕೆ ಎಷ್ಟೂ ಬಾರಿಯಾದರೂ ಬಸಿರಾಗಬಹುದು ಎಂಬ ಯಾವ ಹೇರಿಕೆಯಿಲ್ಲದ, ನಿಗದಿಯಿಲ್ಲದ ಸ್ಥಿತಿ ಹೆಣ್ಣನ್ನು ಮತ್ತೆ ಮತ್ತೆ ಗೃಹಬಂಧನದೊಳಗದೆ ಇರುವಂತಹ ಸಂದರ್ಭವು ಏರ್ಪಟ್ಟಿದೆ.

ಈ ಜನನನಿಯಂತ್ರಣ ಗರ್ಭನಿರೋಧಕ, ಗರ್ಭಪಾತ, ಭ್ರೂಣಹತ್ಯೆ ಇವುಗಳ ಬಗ್ಗೆ ತಿಳಿದಿದ್ದರೂ ಅದು ಗುಪ್ತವಾದ ಸತ್ಯದಂತೆ ಸುಳಿದಾಡಿಡಂದತ ಸ್ಥಿತಿ ಕೇವಲ ಫ್ರಾನ್ಸ್ ಚಿಂತನೆಗೆ ಮಾತ್ರ ಸೀಮಿತವಾದುದಲ್ಲ. ಇಡೀ ಪ್ರಪಂಚಾನ್ವಯಿಸುವಂತಹ ಸತ್ಯ. ಧಾರ್ಮಿಕವಾದಂತಹ ಹೇರಿಕೆ, ಮಡಿವಂತಿಕೆ, ಸಾಮಾಜಿಕ ಸಂದರ್ಭ, ಆರ್ಥಿಕ ಸ್ಥಿತಿ, ರಾಜಕೀಯ ಒತ್ತಡಗಳು ಲೈಂಗಿಕತೆಯ ಮೇಲೆ ನೇರವಾಗಿ ಪರಿಣಾಮ ಬೀರದಿದ್ದರೂ ಈ ಮೇಲೆ ಸೂಚಿಸಿರುವ ಎಲ್ಲ ಸಂದರ್ಭಗಳು ಬಹಳ ಪ್ರಾಬಲ್ಯವನ್ನು ಸಾಧಿಸಿತ್ತು. ''ಗರ್ಭಪಾತ ಎನ್ನುವುದು ಒಂದು ಅಪರಾಧವೆಂದು ೧೫೫೬ರ ಎರಡನೆಯ ಹೆನ್ರಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ.[3] ಈ ಅಪರಾಧಕ್ಕೆ ಶಿಕ್ಷೆ ಮರಣದಂಡನೆಯ ಶಿಕ್ಷೆ ಎಂದು ಹೇಳಲಾಗಿದೆ. ೧೯ನೆಯ ಶತಮಾನದ ಹೊತ್ತಿಗೆ ಗರ್ಭಪಾತವು ಕೊಲೆಯಲ್ಲ, ದೇಶದ್ರೋಹ ಎಂಬ ಲೇಪನವಾಯಿತು. ೧೮೧೦ರಲ್ಲಿ ಫ್ರೆಂಚ್ ಕಾನೂನು ಕಠಿಣ ಶಿಕ್ಷೆಗಳನ್ನು ಈ ಅಪರಾಧಕ್ಕೆ ಸೂಚಿಸಿತ್ತು. ಗರ್ಭಪಾತವು ಅಪರಾಧವೆಂದು ೧೯೪೧ರಲ್ಲಿ ಘೋಷಣೆ ಮಾಡಲಾಯಿತು.

ಮಾನವ ಸಂಬಂಧಗಳು ಜೀವನದಲ್ಲಿ ಬಹಳ ಮಹತ್ತರವಾದುದು ಎಂದೇ ಹೇಳಬಹುದು. ಹೆರುವ, ಹೊರುವ ಪ್ರಕ್ರಿಯೆ ಹೇರಿಕೆಯಾಗಿ ಮಾರ್ಪಟ್ಟಾಗ ಹೆಣ್ಣು

ಅಪ್ರಜ್ಞಾಪೂರ್ವಕವಾಗಿ ಮೌನವಾಗಿ ಪ್ರತಿರೋಧ ತೋರಲು ಆರಂಭಿಸಿದಳು. ಆ ಪ್ರತಿರೋಧಗಳು ಗಂಡು ಹೆಣ್ಣಿನ ನಡುವೆ ಇದ್ದ ಸಂಬಂಧ ಹಾಳಾಗುವ ಸ್ಥಿತಿ ಏರ್ಪಟ್ಟಿತು. ವಿಚ್ಛೇದನ, ಮರುವಿವಾಹ ಮಾಡಿಕೊಳ್ಳುವ ರೀತಿ ಸರ್ವೇ ಸಾಮಾನ್ಯವಾಯಿತು. ಕುಟುಂಬ ವ್ಯವಸ್ಥೆ ಛಿದ್ರಗೊಂಡಿತು. ಆಸ್ತಿ, ಹಣ ಎನ್ನುವಂತಹ ಮೋಹ ಸಮಾಜದಲ್ಲಿ ತೀರಾ ಅಸಮತೋಲನ ಸ್ಥಿತಿಯನ್ನು ತಂದೊಡ್ಡಿತು. ಆಯಾ ದೇಶಕ್ಕೆ ಸಂಬಂಧಪಟ್ಟ ಕಾನೂನಿನಂತೆ ಎಲ್ಲಾ ಕಾಲದಲ್ಲೂ ನಿರ್ಧಾರಗಳು ಏರ್ಪಟ್ಟು ಹೊಸಸಂಬಂಧಗಳ ಕೂಡುವಿಕೆ, ತೊರೆಯುವಿಕೆ ಸಮಾಜದಲ್ಲಿ ತೀರಾ ಅತಿರೇಕಕ್ಕೆ ಹೋದಂತ ಸಂದರ್ಭದಲ್ಲಿ ತಲ್ಲಣದ ವಾತಾವರಣ ಉಂಟಾಯಿತು.

ಸ್ತ್ರೀವಾದದ ನಿಜಸಂಸ್ಥಾಪಕಿ ಲಿಯಾನ್ ರಿಚರ್ಡ್ ೧೮೬೯ರಲ್ಲಿ '' ದ ರೈಟ್ಸ್ ಆಫ್ ವುಮೆನ್'' ಕೃತಿಯನ್ನು ಹೊರತಂದಳು. ೧೮೭೮ರಲ್ಲಿ ಇದೇ ಕೃತಿಯನ್ನು ಕುರಿತು ಅಂತರಾಷ್ಟ್ರೀಯ ಸಮ್ಮೇಳನವನ್ನು ನಡೆಸಿದಳು. ಪೌರಹಕ್ಕು, ಮತದಾನದ ಹಕ್ಕು ಇವುಗಳ ಬಗ್ಗೆ ಚರ್ಚೆ ನಡೆಯಿತು. ೧೮೭೯ರ ಸೋಷಿಯಲಿಸ್ಟ್ ಕಾನ್ಫರೆನ್ಸ್ ಲಿಂಗದ ಸಮಾನತೆಯನ್ನು ಘೋಷಿಸಿತು.4 ಹೀಗೆ ಲಿಂಗ ತಾರತಮ್ಯ ಕೇವಲ ನಿರ್ದಿಷ್ಟ ಪ್ರದೇಶಕ್ಕೆ ತನ್ನ ತೆಕ್ಕೆಯನ್ನು ಅರಳಿಸದೆ ಸರ್ವವ್ಯಾಪಿಯಾಗಿ ಚಿಂತನೆ ನಡೆಸುವಂತಹ ಸ್ಥಿತಿ ಏರ್ಪಟ್ಟಿದ್ದನ್ನು ನಾವು ಈ ಮೂಲಕ ಗ್ರಹಿಸಲು ಸಾಧ್ಯವಿದೆ. ''ವಿಭಜನೆ'' ಎನ್ನುವಂತಹ ಅಂಶ ವಿಶ್ವದ ಎಷ್ಟೋ ಘಟನೆಗಳ ಆಗುಹೋಗುಗಳಿಗೆ ಕಾರಣವಾಗಿದೆ. ಮಾನವ ಸಂಬಂಧಗಳಲ್ಲಿ ಹೆಣ್ಣು/ಗಂಡುಗಳೆಂದು ವಿಭಜಿಸಿರುವ ಅಂಶಗಳನ್ನು ಒಪ್ಪಿಕೊಂಡು ಬಿಟ್ಟಿದೆ.

ವಾಸ್ತವದಲ್ಲಿ ಬೋವಾ ಹೆಣ್ಣು ಏನಾಗಿರುತ್ತಾಳೆ ಎಂಬ ಗ್ರಹಿಕೆಯನ್ನು ಮಾಡುತ್ತಾ - ''ಹೆಂಗಸರು ಕಳೆದುಹೋಗಿದ್ದಾರೆ, ಎಲ್ಲಿ ಹೋದರೋ ಅವರು ? ಇಂದಿನವರು ಹೆಣ್ಣುಗಳೇ ಅಲ್ಲ.[5] ಈ ರೀತಿಯ ಸಾಲನ್ನು ನಿಜವಾಗಿಯೂ ಗ್ರಹಿಕೆ ಸಾಧ್ಯವಾಗುವ ಹೆಣ್ಣು ಅರಿತಾಗ ಅವಳ ಮನಸ್ಸಿನಲ್ಲಾಗುವ ಚರ್ಚೆಗೆ ಮೂರ್ತರೂಪ ಕೊಡುವುದು ಕಷ್ಟಕರ. ಕ್ಷಣಕಾಲ ಮನಸ್ಸಿನಾಳದಲ್ಲಿಯೆ ಚರ್ಚೆ ನಡೆಸುವ ಸಂದರ್ಭವು ಏರ್ಪಡುತ್ತದೆ. ಇಡೀ ನಾಗರೀಕತೆ ಹೆಣ್ಣನ್ನು ಯಾವ ರೀತಿ ರೂಪಿಸಿಕೊಂಡಿದೆ ಎಂಬ ಅಂಶವನ್ನು ಬಹಳ ಮುಖ್ಯವಾಗಿ ಗಮನಿಸಬೇಕು.

ಹುಟ್ಟಿದ ನಂತರ ಮಕ್ಕಳ ಅನುಭವಗಳು, ಎಲ್ಲರಲ್ಲೂ ಸಮಾನ ರೀತಿಯದ್ದೇ ಆಗಿದೆ. ಆದರೆ ಆ ಸಮಾನ ಅಂಶಗಳು ಮುಳುವಾಗುವುದು ಬಾಲ್ಯದಿಂದ ಆರಂಭಗೊಂಡು ಮುಪ್ಪಿನವರೆಗೂ ನಡೆಯುವ ಸಹಜ ಪ್ರಕ್ರಿಯೆ ಎಂದೇ ಹೇಳಬಹುದು. ಬಾಲ್ಯವೆಂಬ ಸಹಜ ಜೀವನದೊಳಗೆ ತನಗೆ ಅರಿವಿಲ್ಲದಂತೆಯೇ ಅಪ್ರಜ್ಞಾಪೂರ್ವಕವಾಗಿ ಪರಂಪರೆಯಿಂದ ಬರುವಂತದ್ದು. ಆ ರೀತಿಯ ಪರಂಪರೆಯಿಂದ ಒದಗಿದ ಸಂದರ್ಭಗಳು ಕಿರಿಕಿರಿಯನ್ನು ಉಂಟು ಮಾಡುತ್ತದೆ.

ಉಡುಪು ಧರಿಸುವ ಪದ್ಧತಿ ಸ್ತ್ರೀವಾದ ಚಿಂತನೆಗೆ ಹೊಸ ಆಯಾಮವನ್ನು ತಂದೊಡ್ಡಿದೆ. ಎಲ್ಲಾ ಮಾನವರು ಮೂಲ ಉದ್ದೇಶ ಬಟ್ಟೆಯನ್ನು ತಮ್ಮ ಮೈ ಮುಚ್ಚುವುದಕ್ಕಾಗಿ ಧರಿಸುವುದು ದೇಹ ಸೌಂದರ್ಯವನ್ನು ಪ್ರದರ್ಶಿಸುವ ರೀತಿ ತೊಡುವ ಉಡುಗೆಗಳು ಸಾಕಷ್ಟು ಗೊಂದಲಗಳನ್ನು ಸೃಷ್ಟಿಸುತ್ತದೆ. ಬಿಸಿಲು, ಮಳೆ, ಗಾಳಿ ಇವುಗಳಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಬಟ್ಟೆಯನ್ನು ಧರಿಸುತ್ತಾರೆ. ಆದರೆ ಅವಳ 'ಸೌಂದರ್ಯ ಪ್ರಜ್ಞೆಯನ್ನು ಮೂಡಿಸುತ್ತದೆ. ಆ ರೀತಿಯ ಸೌಂದರ್ಯ ಪ್ರಜ್ಞೆ ಹೊಸ ಸಂದಿಗ್ಧತೆಯನ್ನು ಸೃಷ್ಟಿಸುತ್ತದೆ.

ಹೆಣ್ಣಿನ ದೇಹ ರಚನೆಯಾಗಿರುವುದು ನೈಸರ್ಗಿಕವಾಗಿಯೇ ಇದೆ. ಸಂತಾನೋತ್ಪಾದನೆ ಆಕೆಗೆ ಒಂದು ವರ. ಆ ನೈಸರ್ಗಿಕ ಕ್ರಿಯೆಗೆ ತಕ್ಕಂತೆ ಹೆಣ್ಣಿನಲ್ಲಿ ಸ್ವಲ್ಪ ಬದಲಾವಣೆ ಇರುತ್ತದೆ. ಈ ಬದಲಾವಣೆಗೆ ಉಡುಪು ಧರಿಸುವ ಪದ್ಧತಿ ಹೊಸ ತಲ್ಲಣವನ್ನು ಉಂಟುಮಾಡಿದ್ದುಂಟು ಜಾತಿ, ವರ್ಗ, ವರ್ಣ ಹೀಗೆ ತಮ್ಮ ವರ್ಗ ಯಾವುದೋ ಅಲ್ಲಿಗೆ ತಕ್ಕಂತೆ ಉಡುಪು ಧರಿಸುವ ಪದ್ಧತಿಯು ಏರ್ಪಟ್ಟಿತು. ಕಾಲ ಬದಲಾದಂತೆ ಹೊಸ ಹೊಸ ಉಡುಪು ಧರಿಸುವ ಕ್ರಮ ಆರಂಭವಾಯಿತು. ಮೂಲ ಆಶಯವಾದ 'ಸಂರಕ್ಷಣೆ'ಯನ್ನು ಮರೆತು ಆಧುನಿಕತೆ ಎಂಬ ಹೆಸರಿನಲ್ಲಿ ವಾಣಿಜ್ಯೀಕರಣ ಎಂಬ ರಾಜಕೀಯದಲ್ಲಿ ಹೆಣ್ಣು ತನಗರಿವಿಲ್ಲದಂತೆಯೇ ಸಿಲುಕಿ ದೇಹವನ್ನು ಉಪಯೋಗಿಸಿ ಹಣವನ್ನು ಗಳಿಸುವ ವಿಧಾನವು ಚಿಂತನೆಗೀಡು ಮಾಡಿದೆ ಎನ್ನಬಹುದು. ನಗರೀಕರಣ, ಜಾಗತೀಕರಣ ಎನ್ನುವ ಪರಿಕಲ್ಪನೆಯನ್ನು ಮನುಷ್ಯನ್ನು ಹೊಸ ಒತ್ತಡಕ್ಕೆ ಸಿಲುಕುವಂತೆ ಮಾಡಿರುವುದಲ್ಲಿ ಅನುಮಾನವೇ ಇಲ್ಲ.

ಬೋವಾ ತಿಳಿಸುವಂತೆ ಬಾಲ್ಯದಲ್ಲಿ ಹೆಣ್ಣುಮಕ್ಕಳ ಬೆಳವಣಿಗೆ ಅವರನ್ನು ಬೆಳೆಸುವ ವಿಧಾನವೇ ಅವರು ಹೆಣ್ಣಾಗಿ ರೂಪುಗೊಳ್ಳುವ ಹಾಗೆ ಮಾಡುತ್ತದೆ. ಜೀವಿಯಾಗಿ ಭೂಮಿಯಲ್ಲಿ ಜನ್ಮ ತಳೆದ ನಂತರ ಹೆಣ್ಣಾಗಿ ಮಾರ್ಪಡುವುದಕ್ಕೆ ಆ ಕಾಲದ ಎಲ್ಲಾ ಒತ್ತಡಗಳು ಕಾರಣವಾಗುತ್ತದೆ ಎಂಬುದನ್ನು ವಿಸ್ತಾರವಾಗಿ ಚಿತ್ರಿಸಿರುವುದನ್ನು ಗಮನಿಸಬಹುದು. ಹೆಣ್ಣು ಎಂಬ ಮಿತಿಯಲ್ಲಿ ಎಲ್ಲಾ ರೀತಿಯ ಕಡಿವಾಣಗಳನ್ನು ಆಕೆಯ ಮೇಲೆ ಹೇರುವುದರಿಂದಲೇ ಅನಿವಾರ್ಯವಾಗಿ ಆಕೆ ಹೆಣ್ಣಾಗುತ್ತಾಳೆ. ಬಹಳ ಸಣ್ಣವಿಷಯವೆನಿಸುವಂತಿದ್ದರೂ, ಬಾಲ್ಯವೆಂಬುದು ಮನುಷ್ಯ ಜೀವನದ ಬಹಳ ಪ್ರಮುಖವಾದ ಘಟ್ಟ ಎನ್ನಬಹುದು.

''ಯುವತಿ'' ಎನ್ನುವ ಸ್ಥಿತಿಯು ಬಹಳ ಸೂಕ್ಷ್ಮ ಸಂದರ್ಭ ಎಂಬುದು ಸಂಕಥನವಾಗಿ ಬಿಟ್ಟಿದೆ. ಬಾಲ್ಯಾವಸ್ಥೆಯಿಂದ ಯುವತಿಯಾಗುವ ಘಟ್ಟ ದೈಹಿಕವಾಗಿ ಅವಸ್ಥಾಂತರವಾಗುವ ಸಂದರ್ಭ. ಹೆಣ್ಣು ಕೋಮಲೆ, ಸೂಕ್ಷ್ಮ ಎನ್ನುವ ಹಾಗೆ ಸಮಾಜ ಸುತ್ತಲಿನ ಪರಿಸರ ಅವಳನ್ನು ಯಾವ ರೀತಿ ಮಾರ್ಪಡಿಸುತ್ತದೆ ಎಂಬುದನ್ನು ಪ್ರಶ್ನೆ ಮಾಡಿಕೊಳ್ಳುವ ಹಾಗೆ ಮಾಡಿರುವುದು ಬೋವಾಳ ಚಿಂತನೆಯ ಫಲ ಎಂದೇ ಹೇಳಬಹುದು. ಮನುಷ್ಯನ ಮುಖ್ಯ ಪ್ರವೃತ್ತಿಗಳಲ್ಲೊಂದಾದುದು 'ಕಾಮ' ಅದರ ಪೂರೈಕೆಗಾಗಿ ಸೃಷ್ಟಿಯಾಗುವ ಗಂಡು ಹೆಣ್ಣಿನ ಸಂಬಂಧ, ಇವು ಸಂಸ್ಥೀಕರಣಗೊಂಡಾಗ ಮಾಡುವ ಪದ್ಧತಿಯೇ 'ವಿವಾಹ'[6]

ಯುವತಿಯಾದೊಡನೆ ಪರಂಪರೆ ನೀಡಿರುವ ಜವಾಬ್ದಾರಿ 'ವಿವಾಹ' ೧೯ನೇ ಶತಮಾನದ ಸಂಪ್ರದಾಯವಾದಿ ಬರಹಗಾರ ಬೋನಾಲ್ಡ್ ''ತಾಯಿಗೆ ಮಗು ಹೇಗೋ ಗಂಡನಿಗೆ ಹೆಂಡತಿ ಹಾಗೆ'' ಎಂದು ಹೇಳುತ್ತಾನೆ. ಹೆಣ್ಣನ್ನು ಯಾವುದೇ ಆಶ್ರಯವಿಲ್ಲದೆ ಒಬ್ಬಂಟಿಯಾಗಿ ಬದುಕಲಾರಳೆಂಬಸ್ಥಿತಿಯನ್ನು ಸಮಾಜವೇ ಏರ್ಪಡಿಸುತ್ತದೆ. ಆದ್ದರಿಂದ ''ವಿವಾಹ: ಸಮಾಜಿಕವಾದಂತಹ ಒತ್ತಡ''ಎಂಬುದು ನನ್ನ ಅಭಿಪ್ರಾಯ ಬೋವ ''ಮಾಂಟೆನ್'' ಪ್ರಾಮಾಣಿಕವಾಗಿ ಹೇಗೆ ಹೆಂಗಸು ಕಟ್ಟುಪಾಡಿಗೆ ಸಿಲುಕುತ್ತಾಳೆಂಬುದನ್ನು ತಿಳಿಸಿದರೆ ''ಪ್ರಾದೋನ್'' ಮದುವೆಯ ಚೌಕಟ್ಟಿನಲ್ಲಿ ಇರಬೇಕೆಂಬುದರ ವಾದವನ್ನು ಚರ್ಚೆ ಮಾಡಿರುವುದನ್ನು ಗಮನಿಸಬಹುದು.

ಇಷ್ಟೆಲ್ಲದರ ಜೊತೆಗೆ ಬೋವಾ ಲೈಂಗಿಕತೆ, ಸಲಿಂಗಕಾಮ ಲೆಸ್ಬಿಯನ್ನರು, ವೇಶ್ಯೆಯರು, ನಾಯಕಸಾನಿಯರು, ವೃದ್ಧಾಪ್ಯದೆಡೆಗೆ ಚಲಿಸುವ ಹೆಣ್ಣಿನ ಜೀವನ, ಸ್ವಮೋಹ, ಪ್ರೀತಿ, ಸ್ವತಂತ್ರ ಮನೋಭಾವದ ಹೆಣ್ಣು ಹೀಗೆ ಹತ್ತು ಹಲವು ಸವಿಸ್ತಾರವಾದ ಹೆಣ್ಣಿನ ಜೀವನದ ಬಗೆಗಿನ ವೈಶಿಷ್ಟ್ಯಮಯ ಪ್ರಸಂಗಗಳನ್ನು ಚಿತ್ರಿಸುವುದಷ್ಟೇ ಅಲ್ಲದೆ ಹೆಣ್ಣಿನ ಬದುಕು ಕೇವಲವಲ್ಲ. ಅವಳ ಬದುಕಿನ ಹಾದಿಯಲ್ಲಿ ಎದುರಿಸುವ ಎಲ್ಲಾ ಘಟ್ಟಗಳ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಿದ್ದಾಳೆ.

ಹೆಣ್ಣಿನ ಬದುಕು ಎಂಬುದನ್ನು ತೀಕ್ಷ್ಣವಾಗಿ ನೋಡಲು ಪ್ರಯತ್ನ ಮಾಡಿದ ಬೋವಾ ಆಕೆಯ ಚಿಂತನೆಯ ಬಗ್ಗೆ ಗಮನಹರಿಸಿದ ಯಾರು ವಿಚಲಿತರಾಗಲು ಸಾಧ್ಯವಿಲ್ಲ. ಆ ಮೂಲಕ ಹೆಣ್ಣಿನ ಜೀವನದ ಪೂರ್ಣಗ್ರಹಿಕೆ ಮಾಡುವುದರ ಪ್ರಯತ್ನದಲ್ಲಿ ವಿಶ್ವದ ಬಹಳ ಪ್ರಮುಖವಾದ ಚಿಂತನೆಯಲ್ಲಿ ಸ್ತ್ರೀವಾದವು ಒಂದು. ಸ್ತ್ರೀವಾದ ಎಂಬ ವಿಷಯಕ್ಕೆ ಹೊಸ ಆಯಾಮ ತಂದುಕೊಟ್ಟ ಬೋವಾಳ ಸಾರ್ವಕಾಲೀಕ, ಸರ್ವವ್ಯಾಪಿ ಚಿಂತನೆಯ ಬಹಳ ಮುಖ್ಯವಾದುದು. ಸ್ತ್ರೀವಾದ ಎಂಬ ಪರಿಕಲ್ಪನೆ ಎಷ್ಟೇ ಹಳೆಯದಾದರೂ ಅದಕ್ಕೆ ಅಧಿಕೃತತೆ ದೊರಕಿಸಿಕೊಟ್ಟ ಆದಿಮ ಸ್ತ್ರೀವಾದಿ ಚಿಂತಕಿ ಸಿಮಾನ್‌ದ ಬೋವಾ ಎನ್ನಬಹುದು.

## ಕೊನೆ ಟಿಪ್ಪಣಿ

1. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ
2. ಡಾ. ಹೆಚ್.ಎಸ್. ಶ್ರೀಮತಿ, ಸಿಮೋನ್‌ದ ಬೋವಾ - ದ ಸೆಕೆಂಡ್ ಸೆಕ್ಸ್, ಪು.ಸಂ-67.
3. ಅದೇಪುಟ-140
4. ಅದೇಪುಟ-143
5. ಎನ್. ಗಾಯತ್ರಿ, ಮಹಿಳೆ - ಬಿಡುಗಡೆಯ ಹಾದಿಯಲ್ಲಿ ವಿವಾಹ ಬಂಧನ, ಪು.ಸಂ. 47.

ಅಂತರ್‌ಜಾಲದಿಂದ ಪಡೆದ ಮಾಹಿತಿ

ಅ. www.spark notes.com

ಆ. www.yahoo.com

# ಅಧ್ಯಾಯ - 2

# ಜೈವಿಕ, ಚಾರಿತ್ರಿಕ, ಸಾಮಾಜಿಕ, ರಾಜಕೀಯ ಹಿನ್ನೆಲೆಯಲ್ಲಿ ಸ್ತ್ರೀವಾದ

## ಜೈವಿಕ ಹಿನ್ನೆಲೆಯಲ್ಲಿ ಸ್ತ್ರೀವಾದ

ಸ್ತ್ರೀಯರ ಬೇರೆ ಬೇರೆ ನೆಲೆಯನ್ನು ಅರಿಯುವುದರ ಮೂಲಕ ಜೈವಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಹೇಗೆ ಭಿನ್ನಳು ಎಂಬುದನ್ನು ಬೋವಾ ತನ್ನ '' ದಿ ಸೆಕೆಂಡ್ ಸೆಕ್ಸ್'' ಕೃತಿಯಲ್ಲಿ ಸುದೀರ್ಘವಾದ ಚರ್ಚೆಯನ್ನು ನಡೆಸಿದ್ದಾಳೆ. ಇದು ಪ್ರಾನ್ಸ್ ಚಿಂತನೆಗೆ ಮಾತ್ರ ಸೀಮಿತವಾದುದಲ್ಲ. ವಿಶ್ವಾತ್ಮಕವಾದುದು. ಆದರೂ ಕನ್ನಡ ಸ್ತ್ರೀವಾದಿ ಚಿಂತನೆ, ಈ ಪ್ರಸ್ತುತ ಸಂದರ್ಭಕ್ಕೆ ಸ್ತ್ರೀಯರಲ್ಲಿ ಉಂಟಾಗಿರುವ, ಉಂಟಾಗುತ್ತಿರುವ ಬೇರೆ ಬೇರೆ ಪರಿಣಾಮಗಳು ಸ್ತ್ರೀಯರಲ್ಲಿ ತರುವ ಒತ್ತಡ, ಚಿಂತನೆ, ಆಶಯ ಇವುಗಳನ್ನು ಈ ಮೂಲಕ ವ್ಯಕ್ತಪಡಿಸುವ ಪ್ರಯತ್ನ ಮಾಡಿದ್ದೇನೆ. ಜೈವಿಕ, ಚಾರಿತ್ರಿಕ, ಸಾಮಾಜಿಕ, ರಾಜಕೀಯ ಹಿನ್ನೆಲೆಯಲ್ಲಿ ಸ್ತ್ರೀವಾದ ಎಂದಾಗ ನಿರ್ದಿಷ್ಟವಾಗಿ ನಡೆಯುವ ಹೋರಾಟವೆಂದಲ್ಲ, ಮೊದಲು ವ್ಯತ್ಯಾಸವೇನು ಎಂಬುದನ್ನು ಗುರುತಿಸಿಕೊಂಡರೆ ಆ ವ್ಯತ್ಯಾಸಕ್ಕೆ ಕಾರಣ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಜೈವಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಸ್ತ್ರೀಯರು ಹೇಗೆ ''ಅನ್ಯಲಿಂಗ'' ವೆಂದು ಪರಿಗಣಿಸಲ್ಪಟ್ಟಿದ್ದಾರೆ ಎಂಬುದು ಬಹಳ ಮುಖ್ಯವಾದುದು. ಜೀವ ವಸ್ತುಗಳು ಎಂದು ಕರೆಸಿಕೊಳ್ಳುವ ಭೂಮಿಯ ಮೇಲಿರುವ ಎಲ್ಲಾ ಜೀವಿಗಳಲ್ಲಿ ಎರಡು ವಿಭಾಗಗಳು ಸಹಜ. ಭೂಮಿಯಲ್ಲಿ ವಾಸವಾಗಿರುವ ಎಲ್ಲಾ ಜೀವಿಗಳು ಸಂತಾನೋತ್ಪಾದನೆ ಮಾಡುವುದು ಪ್ರಕೃತಿ ಸಹಜವಾದಂತಹ ಕ್ರಿಯೆ. ಬೋವಾ ಈ ಜೈವಿಕ ವ್ಯತ್ಯಾಸವನ್ನು ತಿಳಿಸುತ್ತಾ ಹಲವಾರು ಜೀವಿಗಳಲ್ಲಿ ನಡೆಯುವ ಸಂತಾನೋತ್ಪಾದನೆಯನ್ನು ವಿವರವಾಗಿ ನೀಡಿದ್ದಾಳೆ. ಅನಭೋಗಿ, ನಿಯೋಗಿಯ ಕಲ್ಪನೆಯನ್ನು ಸಹ ನೀಡಿದ್ದಾಳೆ. ಜೀವವರ್ಗದಲ್ಲಿ ಗಂಡುಹೆಣ್ಣುಗಳು ಪರಸ್ಪರ ಒಂದನ್ನೊಂದು ಅವಲಂಬಿಸಿವೆ. ಸಂತಾನೋತ್ಪಾದನೆಯ ಕಾರ್ಯದಲ್ಲಿ ಎರಡು ಜೀವಿಗಳು ಪಾಲ್ಗೊಳ್ಳಬೇಕು ಪರಸ್ಪರ ತಮ್ಮನ್ನು ತಾವು ತೊಡಗಿಸಿಕೊಳ್ಳುವುದು ಸಹಜವಾದಂತ ಕ್ರಿಯೆಯಾಗಿ ನಮ್ಮ ಮುಂದೆ ಇದೆ. ಬೋವಾ

ಫ್ಯಾಸೋರಿಯಾ, ಅಮೀಬಾ, ಸ್ಪೊರೊಜೋವದಂತಹ ಏಕಕೋಶಾಣು ಜೀವಿಗಳು ತಾವೇ ವಿಭಜನಗೊಂಡು ವಂಶೋತ್ಪಾದನೆ ಮಾಡುವುದರಿಂದ ಹಿಡಿದು ಬಹುಕೋಶ, ಹರಿವ ನೀರಿನಲ್ಲಿ ವಾಸಿಸುವ ಹೈಡ್ರಾ, ಸಮುದ್ರಜೀವಿ, ಕಪ್ಪೆಗಳು, ಹೀಗೆ ಹಲವು ಉದಾಹರಣೆಗಳನ್ನು ನೀಡಿದ್ದಾಳೆ.

ಬೀಜಾರೋಪಣೆಯ ಅಗತ್ಯದ ಬಗ್ಗೆಯೂ ಚರ್ಚೆ ಮಾಡುತ್ತಾಳೆ. ಲೈಂಗಿಕ ಕ್ರಿಯೆಯ ಅಗತ್ಯತೆಗಳನ್ನು ಹೇಳುತ್ತಾ ಕೆಳವರ್ಗದ ಅಂದರೆ ಏಕಕೋಶದ ಜೀವಿಯಲ್ಲಿ ಮಾತ್ರ ಒಬ್ಬಂಟಿಯಾಗಿ ಸಂತಾನೋತ್ಪಾದನೆ ಸಾಧ್ಯ. ಅದನ್ನು ಹೊರತು ಪಡಿಸಿ ಎಲ್ಲಾ ಜೀವಿಗಳಲ್ಲೂ ಲೈಂಗಿಕ ಕ್ರಿಯೆ ಪ್ರಕೃತಿ ಸಹಜವಾದಂತ ವರ. ಕನ್ನಡ ಸ್ತ್ರೀವಾದಿ ಚಿಂತನೆಯಲ್ಲಿ ಮೂಲ ಜಾಡನ್ನು ಹಿಡಿದು ಜೈವಿಕವಾಗಿ ಹೆಣ್ಣು ಹೇಗೆ ಭಿನ್ನಳೆಂಬುದನ್ನು ವ್ಯಕ್ತಪಡಿಸಿರುವ ಸಾಹಿತ್ಯದಲ್ಲಿ ಸ್ತ್ರೀವಾದದ ಸಿದ್ಧಾಂತವಾಗಿ ಮಂಡಿಸುವ ಸಂದರ್ಭಗಳು ಬಹಳ ಕಡಿಮೆ. ವೈಜ್ಞಾನಿಕ ಮಾಹಿತಿ ತಿಳಿದಿದ್ದರೂ ''ಲೈಂಗಿಕತೆ'' ಎನ್ನುವಂತ ಸಹಜಕ್ರಿಯೆಯ ಮೇಲೆ ಮಡಿವಂತಿಕೆಯ ಲೇಪನ ಹಾಕಿ ಗುಪ್ತಗಾಮಿನಿಯಾಗಿ ಎಲ್ಲಾ ಮಾನವರು ತನ್ನ ಸ್ವಂತ ಅನುಭವವನ್ನು ಅನಾದಿಕಾಲದಿಂದಲೂ ಪಡೆದುಕೊಂಡು ಬಂದ್ದಿದಾರೆ. ''ಪ್ರತಿ ಜೀವಿಯೂ ತನ್ನ ವರ್ಗದ ಮತ್ತೊಂದು ಜೀವಿಯನ್ನು ಸೇರಿ ಪರಿಪೂರ್ಣತೆಯನ್ನು ಪಡೆದು ತನ್ನಂತಹ ಮತ್ತೊಂದು ಜೀವಿಯನ್ನು ಉತ್ಪಾದನೆ ಮಾಡುವುದು ಮಾತ್ರ ಗುರಿಯಲ್ಲ ''ಮನುಷ್ಯ ಮಾನವರೆಲ್ಲರು ಸಮಾನ ಎಂಬ ಅಂಶದೆಡೆಗೆ ಗಮನ ಹರಿಸಬೇಕು ಎಂಬ ಆಶಯ ಬೋವಾಳ ಚಿಂತನೆಯಲ್ಲಿ ಅಡಗಿದೆ.

ಸಂತಾನೋತ್ಪಾದನೆಯ ಬಗೆಗೆ ಹಲವು ತಪ್ಪು ಕಲ್ಪನೆಗಳಿದ್ದುದನ್ನು ಬೋವಾ ನಿವಾರಿಸಿದ್ದಾಳೆ. ಅಂಡಾಣು, ವೀರ್ಯಾಣು, ಫಲೀಕರಣ ಹಾಗೂ ಕ್ರೋಮೋಜೋಮುಗಳ ಬಗೆಗಿನ ವಿವರಣೆಯನ್ನು ವೈಜ್ಞಾನಿಕವಾಗಿ ಗಮನಿಸಿದಾಗ ಸಂತಾನೋತ್ಪಾದನೆಯಲ್ಲಿ ಎರಡು ವರ್ಗಗಳ ಜೀವಿಗಳ ಪಾತ್ರ ಸಮಾನವಾದುದಾಗಿರುತ್ತದೆ. ಅಂಡಾಣು / ವೀರ್ಯಾಣುಗಳಲ್ಲಿರುವ ವ್ಯತ್ಯಾಸದ ಬಗ್ಗೆಯೂ ಮಾಹಿತಿ ನೀಡುವ ಮೂಲಕ ಎರಡು ಜೀವಾಣುಗಳು ಸಂತಾನೋತ್ಪಾದನೆಯ ಕ್ರಿಯೆಯಲ್ಲಿ ಪರಸ್ಪರ ಪಾಲ್ಗೊಳ್ಳುತ್ತವೆ ಎಂಬ ಸತ್ಯ ಸಾಬೀತಾದ ಮೇಲೆ ಹೆಣ್ಣು ಸಮಾನಳು ಸಂತಾನೋತ್ಪಾದನೆ ಒಂದು ಸಮತೋಲನ ಕಾಯುವ ಸ್ಥಿತಿ ಎಂದು ಈ ಮೂಲಕ ಗ್ರಹಿಸಬಹುದು. ಗಂಡು/ಹೆಣ್ಣು ಕೌಮಾರ್ಯಾವಸ್ಥೆಗೆ

ಬರುವ ಸಂದರ್ಭದ ಚರ್ಚೆ ಗ್ರಹಿಕೆಯ ಮುಖ್ಯವಾದುದು. ೧೬-೧೭ ವಯಸ್ಸಿಗೆ ಬರುವ ಗಂಡು ಮಕ್ಕಳಲ್ಲಿ ವೀರ್ಯಾಣು ಉತ್ಪತ್ತಿಯಾಗುತ್ತದೆ. ಹೀಗೆ ಹೆಣ್ಣಿನ ದೇಹದಲ್ಲಿ ಆಗುವ ಬದಲಾವಣೆಗಳು ಒಂದು ಬಗೆಯ ತಳಮಳಕಾರಿ ಸ್ಥಿತಿಗೆ ತಳ್ಳುವಂತದ್ದು. ೧೪-೧೮ ವಯಸ್ಸಿನ ಹೆಣ್ಣಿನ ದೇಹದಲ್ಲಿ ಉಂಟಾಗುವ ಚಲನ-ವಲನ ಹೆಣ್ಣಿಗೆ ಹೊಸ ತಲ್ಲಣವನ್ನೇ ತರುತ್ತದೆ.

ಆಂಗ್ಲೋ ಸ್ಯಾಕ್ಸನರು ಮುಟ್ಟನ್ನು ಶಾಪ ಎನ್ನುತ್ತಾರೆ.[1] ಮುಟ್ಟು ಒಂದು ಹೊಣೆಯಂತೆ, ಅದೊಂದು ಶಾಪ, ಇದು ಕೇವಲ ಫ್ರಾನ್ಸ್ ಸ್ತ್ರೀಯರಿಗೆ ಸೀಮಿತವಾದುದಲ್ಲೂ ವಿಶ್ವಾತ್ಮಕವಾದ ಸಹಜ ಕ್ರಿಯೆ. ಋತುಸ್ರಾವ ಎನ್ನುವುದು ಸೀಮಿತವಲ್ಲ. ಎಲ್ಲಾ ಮಹಿಳೆಯರ ಸಹಜಸ್ಥಿತಿಯೆನ್ನುವ ಸತ್ಯ ಎಲ್ಲರಿಗೂ ತಿಳಿದಿದ್ದರೂ ಅದನ್ನು ಗುಪ್ತವಾಗಿಡುವ ಸಂದರ್ಭದ ಬಗ್ಗೆ ಚಿಂತನೆ ಅಗತ್ಯವಾದುದು. ಇಡೀ ದೇಹವ್ಯವಸ್ಥೆ ಹೆಣ್ಣಿನ ಋತುಸ್ರಾವದ ಸಂದರ್ಭದಲ್ಲಿ ಪಾಲ್ಗೊಳ್ಳುವ ಕ್ರಿಯೆ. ಮುಟ್ಟಿನ ಅವಧಿಯಲ್ಲಿ ಆಗುವ, ತಳಮಳ . ಖಿನ್ನತೆ, ರಕ್ತಸ್ರಾವ ಇವುಗಳನ್ನು ಸಹಜ ಇಡೀ ವಿಶ್ವದ ಎಲ್ಲಾ ಹೆಣ್ಣುಗಳಲ್ಲಿ ಆಗುವ ಪ್ರಕ್ರಿಯೆ ಎಂಬ ಸತ್ಯವನ್ನು ನಾವು ಇಲ್ಲಿ ಗಮನಿಸಬಹುದು.

ಮನುಷ್ಯನ ಜೀವನದಲ್ಲಿ ದೇಹವೆಂಬುದು ಬಹಳ ಮುಖ್ಯವಾದುದು. ಅಂತೆಯೇ ಈ ಮೇಲೆ ತಿಳಿಸಿರುವಂತೆ ಹುಟ್ಟು, ಬಾಲ್ಯ, ಪ್ರೌಢಾವಸ್ಥೆ, ಯೌವ್ವನ, ಲೈಂಗಿಕತೆ, ಸಂತಾನೋತ್ಪಾದನೆ, ಎಲ್ಲವೂ ಸಹಜವಾದ ಕ್ರಿಯೆ. ಆ ಕ್ರಿಯೆಯಲ್ಲಿ ಹೆಣ್ಣು ಗಂಡೆಂಬ ಬೇಧವಿರುವುದನ್ನು ಅಸಮಾನತೆ ಎಂದು ಪರಿಗಣಿಸುವುದಕ್ಕೆ ಸಾಧ್ಯವಿಲ್ಲ.

ಈ ಮೇಲಿನ ಎಲ್ಲಾ ಚರ್ಚೆಯನ್ನು ಗಮನಿಸಿದರೆ ಹೆಣ್ಣು ಹಲವಾರು ವೈಶಿಷ್ಟ್ಯತೆಯನ್ನು ಹೊಂದಿದ್ದಾಳೆ. ಪ್ರೌಢಾವಸ್ಥೆಗೆ ಬಂದ ಹೆಣ್ಣು, ಋತುಸ್ರಾವ, ಬಸಿರು, ಹೆರುವಂತ ರೀತಿ, ಈ ಎಲ್ಲಾ ಕ್ರಿಯೆಗಳು ಹೆಣ್ಣು ಪುರುಷರಿಗಿಂತ ದೈಹಿಕವಾಗಿ ಭಿನ್ನ ಎಂದು ತಿಳಿದರೂ ಹೊಸ ಜೀವವನ್ನು ತನ್ನಲ್ಲಿ ಅಡಗಿಸಿ ರಕ್ಷಿಸಿ ಅದನ್ನು ಪೊರೆಯುವ ಸಾಮರ್ಥ್ಯವನ್ನು ಪಡೆದಿದ್ದಾಳೆ ಎನ್ನುವಂತದನ್ನು ಆಕೆಗಿರುವ ಧನಾತ್ಮಕ ಅಂಶವೆಂಬುದನ್ನು ಹೇಳಲು ಇಚ್ಛೆ ಪಡುತ್ತೇನೆ.

ಪ್ಲೇಟೋನ ಕಲ್ಪನೆಯಂತೆ ಮೊದಲಿಗೆ, ಗಂಡು, ಹೆಣ್ಣು ಮತ್ತು ಉಭಯಲಿಂಗಿಗಳು ಮಾತ್ರ ಇದ್ದವು. ಪ್ರತಿ ಜೀವಿಯಲ್ಲೂ ಎರಡು ಮುಖಗಳು, ನಾಲ್ಕು ತೋಳುಗಳು, ನಾಲ್ಕು

ಕಾಲುಗಳು, ಎರಡು ಜೊತೆಗೂಡಿದ ದೇಹಗಳು ಇರುತ್ತಿದ್ದವು. ಯಾವುದೋ ಕಾಲಘಟ್ಟದಲ್ಲಿ ಇವು ಹೋಳಾಗಿ ಬಿಟ್ಟವು. ಅಲ್ಲಿಂದೀಚೆಗೆ ಪ್ರತಿ ಅರ್ಧವು ತನ್ನಿಂದ ಬೇರ್ಪಟ್ಟ ಇನ್ನೊಂದು ಅರ್ಧದೊಡನೆ ಬೆರೆಯಲು ಹವಣಿಸುತ್ತಿದೆ. ಆನಂತರ ಎರಡು ಬೇರೆ ಬೇರೆ ಲಕ್ಷಣಗಳುಳ್ಳ ಅರ್ಧಭಾಗಗಳು ಜೊತೆಯಾಗುವ ಮೂಲಕವೇ ಹೊಸ ಮಾನವ ಜೀವಿಗಳು ಹುಟ್ಟಬೇಕೆಂದು ದೇವತೆಗಳು ಆದೇಶಿಸಿದರು.[2] ಈ ರೀತಿಯ ವಿಭಜನೆಯನ್ನು ಬೋವಾ ಲಿಂಗಬೇಧ ಎನ್ನುವುದು ಪುರುಷ ದೃಷ್ಟಿಕೋನದಲ್ಲಿ ಆಕಸ್ಮಿಕವಾಗಿ ಸಂಭವಿಸಿದ್ದು ಎಂದು ಹೇಳುತ್ತಾಳೆ.

ಸಂತಾನೋತ್ಪಾದನೆಯ ಬಗ್ಗೆ ಅರಿಸ್ಟಾಟಲ್ ಕಟ್ಟಿದ ಕಥೆಯನ್ನು ಬೋವಾ ತನ್ನ ''ದಿ ಸೆಕೆಂಡ್ ಸೆಕ್ಸ್'' ಕೃತಿಯಲ್ಲಿ ಹೀಗೆ ಉಲ್ಲೇಖಿಸಿದ್ದಾಳೆ. ''ವೀರ್ಯಾಣು ಮತ್ತು ಋತುಸ್ರಾವದ ರಕ್ತಗಳು ಬೆರೆತು ಭ್ರೂಣವಾಗುವುದೆಂದು'' ಅವನ ಕತೆಯಂತೆ ಹೆಂಗಸಿನದು ನಿಷ್ಕ್ರಿಯ ಪಾತ್ರ. ಆದರೆ ಪುರುಷತ್ವಕ್ಕೆ ಬಲ, ಕ್ರಿಯೆ, ಚಲನೆ ಮತ್ತು ಜೀವ ಇವೆಲ್ಲವೂ ಇವೆ. ಹಿಪೋಕ್ರಿಟಿಸ್‌ನ ಕಲ್ಪನೆಯಂತೆ ಒಂದು ದುರ್ಬಲ ಸ್ತ್ರೀ ಬೀಜವಾದರೆ, ಇನ್ನೊಂದು ಸಬಲ ಪುರುಷ ಬೀಜ.[3] ಈ ಚಿಂತನೆ ಕೇವಲ ಅರಿಸ್ಟಾಟಲ್ ಯುಗಕ್ಕೆ, ಕೇವಲ ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗಿರಲಿಲ್ಲ. ಆತನ ಈ ಸಾಂಪ್ರದಾಯಿಕ ಕುರುಡು ಆಲೋಚನಾ ಕ್ರಮವನ್ನು ಇಂದಿಗೂ ನಂಬುವರಿದ್ದಾರೆ.

೧೮೩೫ ರಲ್ಲಿ ಪ್ರೊಟೋಪ್ಲಾಸ್ಮ್ ಎಂದು ಕರೆಯಲಾದ ಸಾರ್ಕೋಡನ್ನು ಕಂಡು ಹಿಡಿದನು.4 ಆನಂತರದಲ್ಲಿ ಜೀವಕೋಶದ ರಚನೆಯು ಸ್ಪಷ್ಟವಾಗತೊಡಗಿತು. ಅಂಡಾಣು - ವೀರ್ಯಾಣುಗಳು ಎರಡು ಪ್ರಜನನ ಅಂಶಗಳು ಸಮಾನ ಎಂಬ ಅರಿವು ಮೂಡಿತು. ವೈಜ್ಞಾನಿಕವಾಗಿ, ಜೈವಿಕವಾಗಿ ಹೆಣ್ಣುಗಂಡು ಹೇಗೆ ಭಿನ್ನ ಎಂಬ ಮಾಹಿತಿ ತಿಳಿದ ಮೇಲೆ ಹೆಣ್ಣು, ಆಕೆಯ ಜೀವಕೋಶ, ಉತ್ಪಾದನಾ ಸಾಮರ್ಥ್ಯ ಇವುಗಳ ಬಗ್ಗೆ ಪೂರ್ಣ ಮಾಹಿತಿ ದೊರತನಂತರವೇ ಸ್ತ್ರೀಯನ್ನು ಗ್ರಹಿಸುವ ರೀತಿ ಭಿನ್ನವಾಯಿತು. ಕನ್ನಡದಲ್ಲಿ ವೈಜ್ಞಾನಿಕ ಮಾಹಿತಿ ನೀಡುವ ಬರಹಗಳು ಬಹಳ ಕಡಿಮೆ ಬೆರಳೆಣಿಕೆಯಷ್ಟು, ಮಾಹಿತಿಗಳು ಕಡಿಮೆ ಇರುವ ಕಾರಣ ಹಳೆಯ ನಂಬಿಕೆಗಳಿಗೆ ಜೋತುಬಿದ್ದ ಸಂದರ್ಭಗಳನ್ನು ನಾವು ಗಮನಿಸಲು ಸಾಧ್ಯವಿದೆ.

ಬೋವಾ ದಾಖಲಿಸಿರುವಂತೆ ವೈಜ್ಞಾನಿಕ ಮಾಹಿತಿಯಂತೆ ಅಂಡಾಣುವಿನ ಮುಂಗಾಣ್ಕೆ ಇಲ್ಲದಿದ್ದರೆ ವೀರ್ಯಾಣುವಿನ ಬರವು ನಿರರ್ಥಕ. ಹಾಗೆಯೇ ವೀರ್ಯಾಣುವಿನ ಉದ್ದೀಪನವಿಲ್ಲದಿದ್ದರೆ ಅಂಡಾಣುವು ತನ್ನೊಳಗೆ ಜೀವಸಾಧ್ಯತೆಗಳನ್ನು ಪೂರ್ಣಗೊಳಿಸಲಾರದು. ಹೀಗಾಗಿ ಎರಡೂ ಪ್ರಜನನಗಳೂ ಸಮಾನ ರೀತಿಯ ಕಾರ್ಯಗಳನ್ನು ನಿರ್ವಹಿಸುತ್ತವೆಂದು ತೀರ್ಮಾನಿಸಬಹುದು. ಎರಡೂ ಕೂಡಿ ತಮ್ಮನ್ನು ಮೀರುವ ಮೂಲಕವೇ ಪಡೆದುಕೊಳ್ಳುವ ಜೀವ ವ್ಯವಸ್ಥೆಯನ್ನು ರೂಪಿಸಿಕೊಂಡಿವೆ. ಗಂಡು ಚೋದಕವಾಗಿಯೂ, ಹೆಣ್ಣು ರಕ್ಷಿಸಿ ಕಾಯುವ ಕಾರ್ಯ ನಿರ್ವಹಿಸುತ್ತಾಳೆ.

ಕ್ರಿಯೆಗೆ ಗಂಡಿನ ಅವಶ್ಯಕತೆಯಿದ್ದರೂ ಹೊರುವ ಸಂರಕ್ಷಿಸುವ ಕೆಲಸವನ್ನು ಹೆಣ್ಣು ಮಾಡುತ್ತಿದ್ದಾಳೆ. ಕೇವಲ ಸಂರಕ್ಷಣೆಯಲ್ಲಿ ಪೊರೆಯುವ ಕೆಲಸವನ್ನು ಮಾಡುತ್ತಾಳೆ.

ಹೆಣ್ಣಿಗೆ ಕೊಡುವ ಕ್ರಿಯೆಯಲ್ಲಿ ಬಯಕೆ ಇದ್ದಾಗಲೂ, ಅದಕ್ಕೆ ಸಿದ್ಧವಿದ್ದರೂ ಸಾಮಾನ್ಯವಾಗಿ ಹೆಣ್ಣನ್ನು ವಶಪಡಿಸಿಕೊಳ್ಳುವವನು ಗಂಡೇ. ಹೀಗೆ ಹಿಡಿದುಕೊಳ್ಳಲು ತಕ್ಕಂಥ ಹಿಡಿದು ಒಂದೆಡೆ ಇರಿಸತಕ್ಕಂತಹ ಅಂಗಗಳು ಗಂಡಿಗಿರುತ್ತದೆ. ಕೊಡುವ ಕ್ರಿಯೆಯಲ್ಲಿ ಹೆಚ್ಚಿನ ಚಲನೆ ಗಂಡಿನದು. ಕೀಟ, ಹಕ್ಕಿ ಮತ್ತು ಸಸ್ತನಿಗಳಲ್ಲೆಲ್ಲ ಹೆಣ್ಣಿನೊಳಗೆ ನುಗ್ಗುವುದು ಗಂಡು. ಹೀಗೆ ನುಗ್ಗಿದಾಗ ಹೆಣ್ಣಿನ ಒಳಭಾಗ ಛಿದ್ರಗೊಳ್ಳುತ್ತದೆ. ಮುಚ್ಚಿದ ಕೋಣೆಯನ್ನು ಮುರಿಯುವ ಕೆಲಸವಿದು.5

ಹೆಣ್ಣು ಹೇಗೆ ಕೂಡುವ ಕ್ರಿಯೆಯಲ್ಲಿ ತನ್ನನ್ನು ತಾನು ಅನ್ಯಲಿಂಗಕ್ಕೆ ವಶವಾಗುತ್ತಾ ಹೋಗುತ್ತಾಳೆ. ಸಹಜ ಪ್ರಕ್ರಿಯೆ ಸಮಾನತೆಯ ಆಶಯ, ಹಂಬಲ ಎಲ್ಲವೂ ಈ ಜೀವರಚನೆಯಲ್ಲಿ ಯಾವ ರೀತಿ ಏರುಪೇರಾದ ಸಂದರ್ಭವನ್ನು ಸೃಷ್ಟಿಸುತ್ತದೆ ಎಂಬ ಅಂಶವನ್ನು ಈ ಮೂಲಕ ಗಮನಿಸಬಹುದು.

ಕೂಡುವ ರೀತಿಯಲ್ಲಿ ಗಂಡಿನದೇ ಮೇಲುಗೈ ಎದ್ದು ಕಾಣುತ್ತದೆ. ಎಲ್ಲಾಪ್ರಾಣಿಗಳಲ್ಲಿಯೂ ಹೆಣ್ಣಿನ ಮೇಲೆರಗುವುದು ಗಂಡು. ಒಳನುಗ್ಗುವ ಅಂಗವೊಂದು ಗಂಡಿನ ಬಳಿ ಇರುತ್ತದೆ. ಆ ಅಂಗ ಈ ಹಂತದಲ್ಲಿ ಹೆಚ್ಚು ಉದ್ರೇಕಗೊಂಡಿರುತ್ತದೆ. ಆದರೆ ಹೆಣ್ಣಿನ ಅಂಗಗಳು ಪಡೆದುಕೊಳ್ಳುವ ಸ್ಥಿತಿಯಲ್ಲಿರುತ್ತದೆ. ಗಂಡು 'ವೀರ್ಯಾಣುವನ್ನು ಇರಿಸಿದರೆ' ಹೆಣ್ಣು ಅದನ್ನು ತೆಗೆದುಕೊಳ್ಳುತ್ತದೆ. ವಂಶೋತ್ಪಾದನೆಯಲ್ಲಿ ಹೆಣ್ಣಿಗೆ ಒಂದು

ಕ್ರಿಯಾಶೀಲ ಸ್ಥಾನವಿದ್ದರೂ ಆ ಹಂತದಲ್ಲಿ ಹೆಣ್ಣಿಗೆ ಸ್ವಂತಿಕೆಯು ಕಳೆದುಹೋಗಿ ಆ ಜೀವಿಯೊಳಗೆ ಒಂದು ಅಪರಿಚಿತ ಅಂಶ ಫಲೀಕರಣ ಕ್ರಿಯೆಯ ಮೂಲಕ ಬಂದು ಸೇರಿಕೊಳ್ಳುತ್ತದೆ.[6]

ಕೂಡುವ ಕ್ರಿಯೆಯಲ್ಲಿ ತನ್ನತನವನ್ನು ಕಳೆದುಕೊಂಡು ಅಪರಿಚಿತತೆ ತನ್ನೊಳಗೆ ಹೊಕ್ಕುವ ಸಂದರ್ಭ ದೈಹಿಕವಾಗಿ ಮಾತ್ರವಲ್ಲದೆ ಮಾನಸಿಕವಾದ ತಲ್ಲಣವನ್ನು ತಂದು ಒಡ್ಡುತ್ತದೆ. ನಿಸರ್ಗದಲ್ಲಿ ಸಹಜವೆನಿಸುವ ಪ್ರಕ್ರಿಯೆ ಹೆಣ್ಣು/ ಗಂಡುಗಳೆಂಬ ಬೇಧ ಉಂಟು ಮಾಡುವಲ್ಲಿ ಲೈಂಗಿಕತೆ ಎನ್ನುವ ಅಂಶ ಎಷ್ಟು ಮುಖ್ಯವಾಗುತ್ತದೆ ಅಮುಖ್ಯವಾಗುತ್ತದೆ ಎಂಬುದರ ಚರ್ಚೆಯ ಅಗತ್ಯತೆ ಇದೆ.

ಬೋವಾ ಈ ಸಂದರ್ಭವನ್ನು 'ಮನೋದೈಹಿಕ ಅವಸ್ಥೆ' ಎನ್ನುತ್ತಾಳೆ. ಆ ಅವಸ್ಥೆಯಲ್ಲಿ ಬದಲಾವಣೆಗಳು ಎದ್ದು ಕಾಣುವಂತಿರುತ್ತದೆ. ಹೆಣ್ಣು ಆಗ ಎಂದಿಗಿಂತಲೂ ಹೆಚ್ಚು ಭಾವುಕಳೂ, ಭಯಸ್ತಳೂ, ಸಿಡಿಮಿಡಿಗೊಳ್ಳುವವಳು ಆಗಿಬಿಡುತ್ತಾಳೆ. ಇದರಿಂದ ಎಷ್ಟೋ ಮಾನಸಿಕ ಅಸ್ಥಿರತೆಗಳು ಕಂಡುಬರುತ್ತದೆ. ಆ ಅವಧಿಯಲ್ಲೇ ಆಕೆಗೆ ತನ್ನ ದೇಹ ತನ್ನದಲ್ಲದ ಯಾವುದೋ ಒತ್ತಡವಾಗಿ ಬಿಡುತ್ತದೆ. ಮುಟ್ಟು, ಸ್ರಾವ, ಹಾರ್ಮೋನುಗಳು ಸ್ರವಿಸುವಿಕೆ, ಅಸಮತೋಲನ ಎಲ್ಲವೂ ಹೆಣ್ಣಿಗೆ ಸಹಜವಾಗಿ ದೊರೆತಿರುವಂತದ್ದು. ಆ ಮೂಲಕವೇ ಸಂತಾನೋತ್ಪಾದನೆ ಮಾಡಲು ಸಾಧ್ಯ ಎಂಬ ಪ್ರಕ್ರಿಯೆಯು ಸತ್ಯವಾದರೂ ಆಕೆ ಅನುಭವಿಸುವ ವಿಶೇಷ ಸಂದರ್ಭಗಳು ಆಕೆಯನ್ನು ಹೆಣ್ಣಾಗಿ ಮಾರ್ಪಡಿಸಿ, ಸ್ವಂತಿಕೆ, ಅಸ್ಮಿತೆಯನ್ನೇ ಮರೆಮಾಡುವ ಸಂದರ್ಭಗಳು ಇವೆ.

ಹೆಣ್ಣು ಎಂದರೇನು ಎಂಬುದನ್ನು ನಿರ್ವಿವಾದವಾಗಿ ವ್ಯಾಖ್ಯಾನಿಸುವುದು ಕಷ್ಟ. ಹೆಣ್ಣನ್ನು ಅಂಡಾಣುಗಳನ್ನು ಉತ್ಪತ್ತಿ ಕೇಂದ್ರವೆಂದು ಗಂಡನ್ನು ವೀರ್ಯಾಣು ಉತ್ಪಾದಕವೆಂದೂ ವರ್ಣಿಸುವುದು ಅಷ್ಟೇನು ಸೂಕ್ತವಲ್ಲ.[7] ಕೇವಲ ಸಂತಾನೋತ್ಪಾದನೆಯ ಉದ್ದೇಶ ಮಾತ್ರ ಗಂಡು ಹೆಣ್ಣಿಗಿರುವುದಿಲ್ಲ. ಸಾಮರಸ್ಯವನ್ನು ಒಳಗೊಂಡ ಸ್ವಾರಸ್ಯಕರ ಬದುಕನ್ನು ಅನುಭವಿಸುವ ಯಾಂತ್ರಿಕತೆಯನ್ನು ಮೀರುವ ಆಶಯ ತುಡಿತ ಕೇವಲ ನಿರ್ದಿಷ್ಟ ಸ್ಥಳಕ್ಕೆ ನಿಗಧಿಯಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಬೋವಾ ಉದಾಹರಣೆಯ ಮೂಲಕ ವಿವರಿಸುತ್ತಾ ಇರುವೆ, ಜೇನು, ಜೇಡಗಳನ್ನು ಉದಾಹರಣೆ ನೀಡುತ್ತಾಳೆ. ಇರುವೆಗಳು ಕೂಡುವ ಕಾಲ ಬಂದಾಗ ಎಲ್ಲ ಗಂಡುಗಳು

ಹೆಣ್ಣುಗಳೊಡನೆ ಹೊರ ಬರುತ್ತವೆ. ಕೂಡುವಲ್ಲಿ ಗೆಲುವು ಪಡೆದ ಇರುವೆಗಳು ಆಯಾಸದಿಂದ ಸತ್ತು ಹೋಗುತ್ತದೆ. ಸೋತ ಗಂಡು ಇರುವೆಗಳನ್ನು ದುಡಿಯುವ ಇರುವೆಗಳು ಮರಳಿ ಗೂಡಿಗೆ ಬರಲು ಬಿಡುವುದಿಲ್ಲ. ಅವು ಹಸಿವಿನಿಂದ ಸಾಯುತ್ತವೆ. ಇಲ್ಲವೇ ಆ ಇರುವೆಗಳನ್ನು ಕೊಲ್ಲಲಾಗುತ್ತದೆ.

ಜೇನುಗಳು ಸಹ ಇದೇ ರೀತಿ ಕೂಡುವ ಕಾಲ ಬಂದಾಗ ರಾಣಿಯೊಡನೆ ಹಾರಿದ ಗಂಡುಜೇನು ಕೂಡಿದ ಕೂಡಲೇ ಚೇತನ ಉಡುಗಿ ನೆಲಕ್ಕೆ ಉರುಳುತ್ತದೆ. ಉಳಿದವು ಸೋಮಾರಿಗಳಾಗಿ ಬದುಕುತ್ತವೆ. ಬಲಶಾಲಿ ಜೇನು ಉಳಿದ ಹುಳುಗಳನ್ನು ನಾಶಪಡಿಸಿ ತಾನು ಗೆದ್ದು ನಿಲ್ಲುತ್ತದೆ. ಚಳಿಗಾಲ ಬಂತೆಂದರೆ ದುಡಿಯುವ ಜೇನುಹುಳುಗಳು ಈ ಸೋಮಾರಿಗಳನ್ನು ಸಾಯಿಸುತ್ತವೆ. ದುಡಿಯುವ ಜೇನುಗಳು ಒಂದೇ ಸಮನೆ ಕೆಲಸ ಮಾಡುತ್ತಾ ಬದುಕುತ್ತವೆ.

ಹೀಗೆ ಪ್ರಾಣಿಗಳಲ್ಲಿ ಕೀಟಗಳಲ್ಲಿ ಸಹ ಈ ಕ್ರಿಯೆಯು ಬಹಳ ಸಹಜವಾಗಿಯೇ, ಅವಲಂಬಿತರಾಗುವಂತೆಯೇ ಇವೆ. ಕೂಡುವ ಕ್ರಿಯೆ ನಿಸರ್ಗದಲ್ಲಿ ಇರುವ ಎಲ್ಲಾ ಸಹಜಪ್ರಕ್ರಿಯೆಗಳಲ್ಲಿ ಒಂದು. ಈ ಸಹಜ ಕ್ರಿಯೆಗಳಲ್ಲಿ ಗಂಡುಹೆಣ್ಣುಗಳು ಪಾಲ್ಗೊಂಡರೂ ಸಹ ಬಲಾಬಲಗಳು ಅಂದಿನಿಂದಲೂ ಹೇಗೆ ವ್ಯಕ್ತವಾಗುತ್ತಾ ಬಂದಿದೆ ಎಂಬುದನ್ನು ತಿಳಿಯಲು ಸಾಧ್ಯವಾಗಿದೆ.

ಸಹಜವಾಗಿಯೇ ಹೆಣ್ಣಿನ ದೇಹದಲ್ಲಾಗುವ ಬದಲಾವಣೆ ಸಹಜವಾಗಿ ಕೆಲವು ಕೊರತೆಗಳು ಉಂಟಾಗುತ್ತವೆ.ರಂಜಕ, ಕ್ಯಾಲ್ಸಿಯಂ, ಕಬ್ಬಿಣಾಂಶ, ಹಾರ್ಮೋನುಗಳ ಏರುಪೇರುಗಳು ಸಹಜವಾಗಿಯೇ ಆಗುವಂತದ್ದು. ಅದರಿಂದ ಉಂಟಾಗುವ ದೈಹಿಕ ತೊಂದರೆಗಳು ಮತ್ತೆ ಸುಧಾರಿಸಿಕೊಳ್ಳುವುದಕ್ಕೆ ದೀರ್ಘಕಾಲ ವ್ಯರ್ಥವಾಗುತ್ತದೆ. ಬೋವಾ ಜೈವಿಕವಾಗಿ ಹೆಣ್ಣು ಹೇಗೆ ಭಿನ್ನ ಅವಳಿಗೆ ಉಂಟಾಗುವ ಕೊರತೆಯ ಬಗ್ಗೆ ಚರ್ಚಿಸಿದ್ದಾಳೆ. ''ಆದರೆ ಆ ಎಲ್ಲಾ ಸಮಸ್ಯೆಗಳನ್ನು ಹೊತ್ತ ಹೆಂಗಸು ದಿನನಿತ್ಯದ ಸಂದರ್ಭಗಳನ್ನು ಸಮದೂಗಿಸುವಾಗ ಆಕೆಗಾಗುವ ತೊಂದರೆ, ಕೊರತೆಗಳನ್ನು ಹುಡುಕಾಟ ಮಾಡಿಲ್ಲ'' ಮಾನಸಿಕವಾಗಿ, ದೈಹಿಕವಾಗಿ ವ್ಯತ್ಯಾಸವಾಗುತ್ತದೆ. ಆದರೂ ಆ ತೊಂದರೆಯು ಹೆಣ್ಣಿನ ಭಾವುಕತೆಗೆ ಹೇಗೆ ಸಂಬಂಧ ಪಡೆದುಕೊಳ್ಳುತ್ತದೆ ಎಂಬುದನ್ನು ಗಮನಿಸಬೇಕು. ಈ ಸಂದರ್ಭ ಹೆಣ್ಣು ಹೆಚ್ಚು ಭಾವುಕಳಾಗುವಂತೆ ಮಾಡುತ್ತದೆ. ಆ ಭಾವುಕತೆಯಿಂದ ಎದೆ

ಬಡಿತ ಹೆಚ್ಚಳ. ಲಜ್ಜೆ, ಅಳುಬುರುಕತನ, ಹುಚ್ಚುಚ್ಚಾಗಿ ನಗುವುದು, ಭಯಗ್ರಸ್ತ ಸ್ಥಿತಿಗೆ ಹೇಗೆ ಸುಲಭವಾಗಿ ತುತ್ತಾಗುತ್ತಾಳೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು.

ಮಾನವ ಹೆಣ್ಣುಗಳು ಎದುರಿಸುವ ಸಂದಿಗ್ಧ ಸಂದರ್ಭಗಳ ಬಗ್ಗೆ ಬೋವಾ ಚರ್ಚಿಸುತ್ತಾಳೆ. ಪ್ರಾಣಿಗಳಿಗಿಂತ ಮಾನವ ಹೆಂಗಸರು ಎದುರಿಸುವ ಸ್ಥಿತಿ ಭಿನ್ನವಾದುದು, ಯಾತನಮಯವಾದುದು, ಕೌಮಾರ್ಯದ ತಳಮಳ ಋತುಬಂಧದ ಇಕ್ಕಟ್ಟು, ತಿಂಗಳ ಮುಟ್ಟಿನ ಶಾಪ, ಬಸಿರು, ನೋವು ತರುವ ಹೆರಿಗೆ, ಖಾಯಿಲೆ, ಆಕಸ್ಮಿಕವಾಗಿ ಕಾಣಿಸಿಕೊಳ್ಳುವ ರೋಗಲಕ್ಷಣ, ಈ ಎಲ್ಲಾ ಸಂದರ್ಭಗಳನ್ನು ಹೆಣ್ಣು ಎದುರಿಸ ಬೇಕಾಗುತ್ತದೆ. ಆದರೆ ಈ ಎಲ್ಲಾ ಸಮಸ್ಯೆಗಳು ಎಲ್ಲಾ ಹೆಣ್ಣಿಗಿದೆ ಎಂಬುದನ್ನು ಮನವರಿಕೆ ಮಾಡಿಕೊಟ್ಟವಳು ಬೋವಾ, ಪ್ರಸ್ತುತ ಸಂದರ್ಭದಲ್ಲಿ ಮಹಿಳೆ ತನ್ನನ್ನು ತಾನು ಎಲ್ಲಾ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಕಾರ್ಯ ನಿರತಳಾಗಿದ್ದಾಳೆ. ಕುಟುಂಬ, ಸಮಾಜ, ಉದ್ಯೋಗ ಹೀಗೆ ಹಲವು ಸ್ಥರದಲ್ಲಿ ಮೇಲೆ ತಿಳಿಸಿದ ಎಲ್ಲಾ ಸಮಸ್ಯೆಗಳನ್ನು ಮೀರಿ ಸಾಗಬೇಕಾದ ಅನಿವಾರ್ಯತೆಯಿದೆ. ಆ ಸಂದರ್ಭಗಳನ್ನು ಜೊತೆಗೂಡಿ ಹಲವು ಹೊಣೆಯನ್ನು ನಿರ್ವಹಿಸಬೇಕಾದಂತ ವಿಧಾನವು ಹೆಣ್ಣಿನ ಯಶಸ್ಸಾಗಿದೆ.

ಹೆಣ್ಣು ಗಂಡಸಿನಷ್ಟೇ ಕೆಲವೊಮ್ಮೆ ಅವನಿಗಿಂತ ಹೆಚ್ಚು ಕಾಲ ನೋವುಣ್ಣುತ್ತಾ ತನ್ನ ಮೇಲೆ ತನಗೆ ಹಿಡಿತವಿಲ್ಲದೆ ಬದುಕಬೇಕಾಗುತ್ತದೆ.8 ಹೆಣ್ಣಿನ ದೇಹ ಆಕೆಯ ಸಂದರ್ಭ ಹಲವಾರು ಅವಸ್ಥೆಗಳನ್ನು ಎದುರಿಸಿ ಜೀವಿಸಬೇಕಾಗುತ್ತದೆ. ಜಗತ್ತಿನ ಬೇರೆ ಬೇರೆ ರೀತಿಯ ಸಂದಿಗ್ಧಗಳನ್ನು ಎದುರಿಸಬೇಕಾಗುವ ಸಂದರ್ಭವನ್ನು ನಾವು ಮರೆವಂತಿಲ್ಲ.

ಬೋವಾ ಹೆಣ್ಣನ್ನು ಅರಿಯಬೇಕಾದರೆ ಆಕೆಯ ಅಂಗರಚನೆಯ ಉತ್ತರವೇ ? ಹೆಣ್ಣನ್ನು ಅರಿಯುವುದು ಆಕೆಯ ದೈಹಿಕ ಸ್ಥಿತಿಯಿಂದ ಮಾತ್ರವೇ ? ಲಿಂಗತಾರತಮ್ಯ ಮೂಡಲು ದೇಹವ್ಯವಸ್ಥೆಯ ಮೂಲ ಕಾರಣವೇ ? ಈ ಎಲ್ಲಾ ಪ್ರಶ್ನೆಗಳನ್ನು ನಮ್ಮಲ್ಲಿ ಮೂಡಿಸುತ್ತಾಳೆ. ಹೆಣ್ಣು ತನಗೆ ತಾನೇ ಅನ್ಯಳೆಂಬ ನಿರ್ಧಾರಕ್ಕೆ ಬರಲು ಹೇಗೆ ಸಾಧ್ಯವಾಗುತ್ತದೆ ? ಆಕೆಯ ವ್ಯಕ್ತಿತ್ವಕ್ಕೂ ಘಟಿಸುವ ಘಟನೆಗಳಿಗೂ ಹೇಗೆ ಸಂಬಂಧವಿದೆ ಎಂಬ ಹುಡುಕಾಟ ಇಲ್ಲಿ ವ್ಯಕ್ತವಾಗುತ್ತದೆ.

**ಚಾರಿತ್ರಿಕ ಹಿನ್ನೆಲೆಯಲ್ಲಿ ಸ್ತ್ರೀವಾದ**

''ಘಟಿಸಿಹೋದ ಘಟನೆಗಳಲ್ಲಿ ಚರಿತ್ರೆಯ ಪುಟಸೇರಿ ಇತಿಹಾಸವಾಗುತ್ತದೆ. ಮನುಷ್ಯ ಬುದ್ಧಿವಂತ ಜೀವಿ. ಎಲ್ಲಾ ಪ್ರಾಣಿವರ್ಗಗಳಲ್ಲಿ ಚಿಂತನೆ ಮಾಡಲು ಸಾಧ್ಯವಾಗುವಂತಹ ಜೀವಿ ಮನುಷ್ಯ. ಏಂಗಲ್ಸ್ ಕೃತಿಯಲ್ಲಿ ಚರಿತ್ರೆಯನ್ನು ಕಟ್ಟಿಕೊಡುತ್ತಾನೆ. ಶಿಲಾಯುಗ, ಸಮುದಾಯ, ಕೃಷಿ ಇವುಗಳ ಚರ್ಚೆ ಮಾಡಿದ್ದಾನೆ. 'ಶ್ರಮ ವಿಭಜನೆ' ಎನ್ನುವ ಅಂಶ ಹೇಗೆ ಎರಡು ವರ್ಗವನ್ನಾಗಿ ಮಾರ್ಪಡಿಸಿತ್ತು ಎಂಬ ಅಂಶವು ಮುಖ್ಯವಾದುದು. ಪುರುಷರು ಹೊರಗೆ ದುಡಿಯುವ ಮಹಿಳೆಯರು ಮನೆಯಲ್ಲಿ ದುಡಿಯುವ ವಿಷಯ ಅಂದಿನಿಂದಲೇ ರೂಢಿಗೆ ಬಂದಿತು. ಬೋವಾ ಜೈವಿಕವಾಗಿ ಹೆಣ್ಣು ಹೇಗೆ ಭಿನ್ನ ಎಂಬ ಸುದೀರ್ಘ ಚರ್ಚೆಯನ್ನು ಮಾಡಿರುವುದು ಹಾಗೂ ಚಾರಿತ್ರಿಕ ಭಿನ್ನತೆಗಿರುವ ಸಂಬಂಧವನ್ನು ಗಮನಿಸಬಹುದು. ಜೈವಿಕ ಅಂಶ ಶ್ರಮವಿಭಜನೆ ಮಾಡುವಲ್ಲಿ ಹೆಣ್ಣಿನ ಪಾಲು ಯಾವ ರೀತಿ ಆಯಿತು ಎಂಬ ವಿಧವನ್ನು ನಾವು ಗಮನಿಸಬೇಕು.

ಪುರುಷರು ಹೊರಗೆ ದುಡಿಯುವುದು, ಹೆಂಗಸು ಮನೆಯಲ್ಲಿ ದುಡಿಯುವುದು ಎಂಬುದು ಚಾರಿತ್ರಿಕ ಅಂಶವಾಯಿತು. ಹೆಣ್ಣನ್ನು ನಾಲ್ಕು ಗೋಡೆಯ ಮಧ್ಯೆ ಸಿಲುಕಿಸುವಂತ ಸಂದಿಗ್ಧತೆಯನ್ನು ಚರಿತ್ರೆಯಲ್ಲಿ ಕಾಣಬಹುದು. ಮನೆಗೆಲಸಕ್ಕೆ ಸೀಮಿತವಾದ ಹೆಣ್ಣು ಎಂದು ಆಕೆಯನ್ನು ತಿರಸ್ಕಾರ ಮಾಡುವಂತಿರಲಿಲ್ಲ. ಮನೆಗೆಲಸದ ಜೊತೆ ಕುಂಬಾರಿಕೆ, ನೇಯ್ಗೆ, ತೋಟಗಾರಿಕೆ, ಮುಂತಾದ ಚಟುವಟಿಕೆಗಳ ಜೊತೆಗೆ ಹೆಂಗಸರು ಆರ್ಥಿಕವಾಗಿ ತಮ್ಮನ್ನು ತಾವು ತೊಡಗಿಸಿಕೊಂಡು ಉದಾಹರಣೆಯ ಬಗ್ಗೆ ಮಾಹಿತಿ ಇದೆ. ಕೃಷಿ, ಭೂಮಿಯ ವಿಸ್ತರಣೆ ಖಾಸಗಿ ಆಸ್ತಿಯ ಹಕ್ಕು, ನೆಲದ ಹಂಬಲ ಇವು ಮನುಷ್ಯನ ಹಲವು ಸಹಜ ಆಮಿಷಗಳಾಗಿ ಕಂಡು ಬಂದವು. 'ಗುಲಾಮರನ್ನು, ನೆಲವನ್ನು ತನ್ನ ಮುಷ್ಠಿಯಲ್ಲಿಟ್ಟುಕೊಂಡ ಗಂಡಸು ಇದೇ ಬಗೆಯಲ್ಲಿ ಹೆಂಗಸನ್ನೂ ತನ್ನ ಹಿಡಿತಕ್ಕೆ ತೆಗೆದುಕೊಂಡ. ''ಇದು ಹೆಣ್ಣಿಗೆ ಬಂದೊದಗಿದ ಚಾರಿತ್ರಿಕ ಸೋಲು'' [9] ಸೋಲಿನ ಸುಳಿವು ಯಾವುದೇ ಸೂಚನೆ ನೀಡದೆ ಮನುಕುಲದ ಒಂದು ಪ್ರಮುಖ ಘಟನೆಯಾಗಿದ್ದು ಅಪ್ರಜ್ಞಾಪೂರ್ವಕ ನೆಲೆಯಲ್ಲಿಯೇ ಎಂಬುದು ಮರೆಯುವ ಹಾಗಿಲ್ಲ.

ಬೋವಾ ಚಾರಿತ್ರಿಕವಾಗಿ ಹೆಣ್ಣು ಮುಖ್ಯವಾಹಿನಿಗೆ ಬಾರದೆ ಹೋದ ಸಂದರ್ಭವನ್ನು ಚರ್ಚೆಮಾಡಿದ್ದಾಳೆ. ಬೆಬೆಲ್ ಹೆಂಗಸರನ್ನು ಕುರಿತು ಸಮಾಜವಾದಕ್ಕೂ ಹಾಗೂ ಹೆಂಗಸಿನ ಸ್ಥಿತಿಗತಿಗೂ ಇರುವ ಸಂಬಂಧವನ್ನು ಕುರಿತು ಹೇಳುತ್ತಾ ''ಹೆಂಗಸು ಮತ್ತು ದುಡಿಮೆಗಾರರು ಇಬ್ಬರೂ ಶೋಷಿತರೇ'' ಆರ್ಥಿಕ ಪ್ರಗತಿಯಿಂದ ಮಾತ್ರ ವಿಮೋಚನೆ ಸಾಧ್ಯ [10] ಎಂಬ ಅಂಶವನ್ನು ಹೇಳುತ್ತಾನೆ. ಆರ್ಥಿಕ ಸ್ವಾತಂತ್ರ್ಯ ಎನ್ನುವ ಪರಿಕಲ್ಪನೆ ಕಾಲಾತೀತವಾದುದು. ಇಂದಿನವರೆಗೂ ಹೆಣ್ಣು, ಸ್ವಾವಲಂಬನೆ, ಆರ್ಥಿಕ ಸ್ವಾತಂತ್ರ್ಯ ಎನ್ನುವ ಅಂಶಗಳು ಮುಖ್ಯವಾಗಿದೆ.

ಹೆಣ್ಣು ನೇಗಿಲು ಹಿಡಿದು ಉಳುವುದಕ್ಕಿಂತ ಮಕ್ಕಳನ್ನು ಹೆರುವುದು ಹೆಚ್ಚು ಉಪಯುಕ್ತ. ಈ ಸಮಸ್ಯೆಯನ್ನು ಏಂಗಲ್ಸ್ ಮರೆಮಾಚುತ್ತಾನೆ.[11] ಬೋವಾ ಏಂಗಲ್ಸ್‌ನ ಮಾತುಗಳನ್ನು ಗ್ರಹಿಸಿ ಹೆಣ್ಣು ಸಂತಾನೋತ್ಪಾದನೆಯಲ್ಲಿ ತೊಡಗಬೇಕೆಂಬ ಸಾಮಾಜಿಕ ಹೊಣೆಯ ಬಗ್ಗೆ ಜವಾಬ್ದಾರಿಯ ಬಗ್ಗೆ ಧನಿಯೆತ್ತಿರುವುದು ಕಾಣಬಹುದು. ಬೋವಾ ಸಮಾಜದ ವ್ಯವಸ್ಥೆಯನ್ನು 'ಲಿಂಗಗಳ ನಡುವೆ ಏರ್ಪಟ್ಟಿರುವ ಶ್ರೇಣೀಕರಣದ ನೆಲೆಗಳನ್ನು ಗ್ರಹಿಸುವುದಗು ಸಾಧ್ಯ' ಎಂದು ಹೇಳುತ್ತಾಳೆ.

ಕೃಷಿ ಪೂರ್ವಜಗತ್ತಿನಲ್ಲಿ ಹೆಂಗಸಿನ ಸ್ವರೂಪ ಹೇಗಿತ್ತೆಂಬುದು ತಿಳಿಯುವುದು ಕಷ್ಟವಾಗಿದೆ. ದೈಹಿಕವಾಗಿ ಬಲಶಕ್ತಿಯಲ್ಲಿ ಆಕೆ ಹೇಗಿದ್ದಳೆಂಬ ವಿವರ ಮಾಹಿತಿ ತಿಳಿಯದಿದ್ದರೂ ಹೆಣ್ಣು ಶ್ರಮಜೀವಿ ಎಂಬ ಅಂಶವನ್ನು ಬೋವಾ ತನ್ನ ಚ ರ್ಚೆಯಲ್ಲಿ ತಿಳಿಸಿದ್ದಾಳೆ. ದ ಹೋಮೆ ನಿರೂಪಿಸಿದ ಕಥೆಯನ್ನು ಬೋವಾ ಚರ್ಚಿಸಿದ್ದಾಳೆ. ಗಂಡು ಬರೀ ಹೆಂಗಸರ ಬಲಾಬಲಗಳ ಚರ್ಚೆಯು ಸಹ ನಡೆಯದಿದೆ. ಹೆಣ್ಣು ಎಷ್ಟೇ ಬಲವಾಗಿದ್ದರೂ ಆಕೆ ಜೈವಿಕವಾಗಿ ನಡೆಯುತ್ತಿದ್ದ ನೈಸರ್ಗಿಕ ಕ್ರಿಯೆಯಲ್ಲಿ ತೊಡಗಲೇಬೇಕಾದ ಸಂದರ್ಭವನ್ನು ಗ್ರಹಿಸಬಹುದು. ಜೈವಿಕವಾಗಿ ಹೆಣ್ಣು ಹೇಗೆ ಭಿನ್ನವೋ ಸಮಾಜದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದರೂ ಸಹ ಎರಡೂ ಒಂದನ್ನೊಂದು ಬೆರೆತು ಹೋಗುವ ರೀತಿಯನ್ನು ಗಮನಿಸಬಹುದು.

ಬಸಿರು, ಹೆರಿಗೆ, ಮುಟ್ಟುಗಳು ದುಡಿಯುವ ಸಾಮರ್ಥ್ಯವಿದ್ದರೂ ದೈಹಿಕ ಶಕ್ತಿಯನ್ನು ಕುಗ್ಗಿಸುತ್ತಿದ್ದವು. ಲೈಂಗಿಕತೆ ಸಹಜಕ್ರಿಯೆ ಆ ಕ್ರಿಯೆಯಲ್ಲಿ ತೊಡಗುವ ಮನುಷ್ಯ ಸಂಕುಲ, ಸಂತಾನೋತ್ಪಾದನೆ ನಿರಾತಂಕವಾಗಿ ಸಾಗಿದ ಕ್ರಿಯೆ. ಹೊರುವ ಹೆರುವ

ಕ್ರಿಯೆಯಾವ ಅಡೆತಡೆಯಿಲ್ಲದಂತೆ ಸಾಗಿತು. ಆ ಸಂದರ್ಭ ಹೆಣ್ಣಿನ ದೈಹಿಕ ಸಾಮರ್ಥ್ಯವನ್ನು ಕಡಿಮೆ ಮಾಡಿ ನಿಂತಿತ್ತು. ಹೆರುವುದು ಯಾಂತ್ರಿಕ ಕ್ರಿಯೆಯಾಯಿತು. 'ಹೆರುತ್ತಿದ್ದ ಹೆಂಗಸರಿಗೆ ಸೃಷ್ಟಿಸುವ ಹೆಮ್ಮೆ ಇರಲಿಲ್ಲ. ತಾನೂ ಅನೂಹ್ಯ ಶಕ್ತಿಗಳ ಕೈಗೊಂಬೆ ಭಾವ ಅವಳಲ್ಲಿ ಮೂಡಿತ್ತು. ಹೆರುವಿಕೆಯ ಅತೀವ ಅಸಹನೀಯ ನೋವು ನಿರರ್ಥಕವೆಂದೂ, ಅಪಾಯಕಾರಿ ಅವಸ್ಥೆ ಎದೂ ತಿಳಿಯಲಾಗುತ್ತಿತ್ತು. ಅಲ್ಲದೆ ಹೆಮರುವುದು ಮೊಲೆಯೂಡಿಸುವುದು ಕೆಲಸಗಳಾಗಿರಲಿಲ್ಲ. ಅವು ಸಹಜ ಪ್ರಕ್ರಿಯೆಗಳಾಗಿದ್ದವು.[12]

ತನ್ನಲ್ಲಿದ್ದಂತಹ ಹೆರುವ ಶಕ್ತಿಯ ಬಗ್ಗೆ ಆಕೆಗೆ ನಕಾರಾತ್ಮಕ ಅಂಶವಾಗಿಯೂ ಕಂಡುಬರುತ್ತಿದ್ದಂತಹ ಸ್ಥಿತಿಯ ಚಿತ್ರಣ ಬೋವಾಳ ವಾದದ ಮೂಲಕ ತಿಳಿದು ಬರುತ್ತದೆ. ಗಂಡಸಿನ ಕ್ರಿಯೆಗಳಿಗೆ ಘನತೆ ತಂದುಕೊಟ್ಟ ಅಂಶವನ್ನು ತಿಳಿಯಬಹುದು. ಅವರು ಸೃಷ್ಟಿಯಲ್ಲಿನ ಎಲ್ಲಾ ವಸ್ತುಗಳ ಮೇಲೆ ಹಿಡಿತ ಸಾಧಿಸಿದ ಅದಕ್ಕಾಗಿ ಭೇಟೆ, ಅನ್ವೇಷಣೆ, ಆಯುಧಗಳು ಹೀಗೆ ಹಲವಾರು ತೆರನಲ್ಲಿ ತನ್ನ ಪ್ರಯತ್ನ ಮಾಡಿದ. ಆ ಮೂಲಕ ಯಶಸ್ಸನ್ನು ಗಳಿಸುವ ಸಂದರ್ಭವು ಪೂರ್ಣ ಹಿಡಿತವು ಪುರುಷನಿಗೆ ತಂದು ಕೊಟ್ಟಿತು. ''ಹೆಣ್ಣು ಹೆರುವ ಕೆಲಸದಲ್ಲಿ ತನ್ನ ದೇಹಕ್ಕೆ ಪ್ರಾಣಿಗಳಂತೆಯೇ ಅಧೀನಳಾದಳು.'' ಸಮಾಜದದಲ್ಲಿ ಅಪ್ರಜ್ಞಾಪೂರ್ವಕವಾಗಿಯೇ ತನ್ನತನವನ್ನು ಕಳೆದುಕೊಂಡು ಜೈವಿಕ ನಿಯಮಗಳಿಗೆ ಬದ್ಧಳಾಗಿ ಅನುಭವಿಸಿದ ಯಾತನಮಯ ಬದುಕಿನ ಸಂದರ್ಭದ ದಿನಗಳನ್ನು ನೆನಪು ಮಾಡಿಕೊಳ್ಳಬಹುದು.

ಕೃಷಿಕರು, ಒಂದೆಡೆ ನೆಲಸಿ ಭೂಮಿ, ಒಡೆತನ, ನ್ಯಾಯಪದ್ಧತಿ, ಹೀಗೆ ಹಲವು ಅಂಶಗಳು ಪ್ರಮುಖವಾದೊಡನೆ ಪುರುಷರು ತಮ್ಮ ಬೌದ್ಧಿಕ ವಿಸ್ತಾರತೆಯನ್ನು ಹೆಚ್ಚಿಸಿಕೊಂಡು ಎಲ್ಲವನ್ನು ಆಕ್ರಮಿಸಿಕೊಳ್ಳಲು ಮುಂದಾದರು. ಹೋರಾಟ ಎನ್ನುವುದು ಬದುಕಿನ ಅನಿವಾರ್ಯತೆಗಳಲ್ಲಿ ಒಂದಾಯಿತು. ಎಲ್ಲದರ ಮೇಲೆ ಹಿಡಿತ ಸಾಧಿಸುವ ಸಂದರ್ಭವು ಏರ್ಪಟ್ಟಿತು. ಗುಂಪುಗುಂಪುಗಳಾಗಿ ಮನುಷ್ಯ ನೆಲೆನಿಲ್ಲಲು ಆರಂಭವಾದ ಮೇಲೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಚೌಕಟ್ಟುಗಳನ್ನು ಹಾಕಿಕೊಂಡಿತ್ತು. ಶಿಶು ಜನನ ಒಂದು ಆಕಸ್ಮಿಕ ಎಂದಿದ್ದ ನಂಬಿಕೆ ಬದಲಾಗತೊಡಗಿತು. ದೇವರು ಎನ್ನುವ ಕಲ್ಪನೆ ಮುಖ್ಯವಾಗತೊಡಗಿತು. ಎಲ್ಲವೂ ದೇವರು ಕೊಟ್ಟ ವರ ಎನ್ನುವ ಭಾವವು ಸಮಾಜದಲ್ಲಿ

ಮೂಡಿತು. ನಂಬಿಕೆ ಎನ್ನುವಂಥದು ಸಮಾಜದಲ್ಲಿ ಬೇರೆ ಬೇರೆ ರೀತಿಯಾಗಿ ವಿಮುಖವಾಗಲು ಸಾಧ್ಯವಾಯಿತು.

ಸಿಮೋನ್‌ದ ಬೋವಾ ಕೆಲವು ಉದಾಹರಣೆಗಳ ಮೂಲಕ ಹೆಂಗಸರು ನಂಬಿಕೆ ಎಂಬ ಸಂದಿಗ್ಧತೆಯಲ್ಲಿ ಸಿಲುಕಿ ಹೇಗೆ ತಮ್ಮ ಜೀವನವನ್ನು ಚರಿತ್ರೆಯಲ್ಲಿ ಎದುರಿಸಿದರೆಂಬ ವಿಷಯವನ್ನು ಉದಾಹರಣೆಯ ಮೂಲಕ ತಿಳಿಸುತ್ತಾರೆ. ಇಂಡಿಯನ್, ಆಸ್ಟ್ರೇಲಿಯನ್ ಮತ್ತು ಪಾಲಿನೀಶಿಯನ್ ಬುಡಕಟ್ಟುಗಳಲ್ಲಿ ಆಚರಿಸುತ್ತಿದ್ದ ನಂಬಿಕೆ ಹೇಗಿತ್ತು. ಅದು ಆಚರಣೆಯೋ ಅಥವಾ ಹೆಣ್ಣನ್ನು ಹೆಣ್ಣಾಗಿ ಮಾಡಲ್ಪಟ್ಟ ಸಂದರ್ಭವೂ ಎನಿಸುತ್ತದೆ. ಬಂಜೆ ಹೆಂಗಸರು ಕೃಷಿ ಭೂಮಿಗೆ ಕಾಲಿಡಬಾರದು. ಸುಗ್ಗಿಯ ಬೆಳೆಯನ್ನು ಬಸಿರಿ ಹೆಂಗಸರು ಸಂಗ್ರಹ ಮಾಡಿದರೆ ಅದರ ಪ್ರಮಾಣ ಹೆಚ್ಚುತ್ತದೆ. ಇಂಡಿಯಾದಲ್ಲಿ ಹಿಂದೊಮ್ಮೆ ಹೆಂಗಸು ಬೆತ್ತಲೆಯಾಗಿ ರಾತ್ರಿವೇಳೆ ಹೊಲದ ಉಳಿಮೆ ಕೆಲಸವನ್ನು ಮಾಡುತ್ತಿದ್ದಳು. ಈ ನಂಬಿಕೆಗಳು ಸಮುದಾಯದ ಒಳಿತಿಗೆ ಎಂದು ಮೇಲ್ನೋಟಕ್ಕೆ ಅನಿಸಿದ್ದರೂ ಚರಿತ್ರೆಯಲ್ಲಿ ಹೆಣ್ಣು ಹೀಗೆ ಇರಬೇಕೆಂದು ನಿಯಮಾವಳಿಯನು ಮಾಡಿದಂತ ವ ರೀತಿ ಇಳಿದುಬರುತ್ತದೆ. ಹೆಣ್ಣಾಗಿ ಯಾರು ಹುಟ್ಟುವುದಿಲ್ಲ. ಹೆಣ್ಣಾಗಿ ಮಾರ್ಪಡುತ್ತಾಳೆ ಎನ್ನುವ ರೀತಿಯನ್ನು ಸ್ಪಷ್ಟ ಪಡಿಸುವ ರೀತಿ ಬೋವಾಳ ಚಿಂತನೆ ಸಾಗುತ್ತಿದೆ.

ಸಮಾಜದಲ್ಲಿ ಹೀಗೆಯೇ ಇರಬೇಕೆಂದು ನಿಯಮದೊಳಗೆ ಇದ್ದರೂ ಸಹ ದುಡಿಮೆ ಹೆಣ್ಣಿಗೆ ವಿಶೇಷ ಸ್ಥಾನವನ್ನು ಒದಗಿಸಿಕೊಟ್ಟಿತು. ದುಡಿಯುವುದು ಎನ್ನುವ ಅಂಶ ಆಕೆಯನ್ನು ಕ್ರಿಯಾಶೀಲವಾಗಿರಿಸುವಲ್ಲಿ ಜೊತೆಗೆ ಆರ್ಥಿಕವಾಗಿ ಸ್ವಾವಲಂಬಿಯಾಗುವಲ್ಲಿ ಮತ್ತು ಸಂಘಟನೆಯ ಶಕ್ತಿಯಾಗಿ ಪರಿವರ್ತಿತವಾಗುವುದಕ್ಕೆ ಸಾಧ್ಯವಾಗಿ ಸನ್ನಿವೇಶವನ್ನು ನೆನಪಿಗೆ ತರುತ್ತದೆ. ಚಾಪೆ ಹೆಣೆಯುವುದು, ಬುಟ್ಟಿ ಮಾಡುವುದು, ಮಡಿಕೆ ತಯಾರು ಮಾಡುವುದು, ಇಂತಹ ಕ್ರಿಯೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ದಿನನಿತ್ಯದ ಅಗತ್ಯತೆಗಳನ್ನು ತಿಳಿಯಲು ಮುಂದಾದರು. ಆ ಮೂಲಕ ವ್ಯವಸ್ಥಿತ ಸಮಾಜ ನಿರ್ಮಾಣದ ಪಾಲುದಾರರಾದರು'' ನಿತ್ಯದ ಬೇಡಿಕೆಗಳನ್ನು ಅರಿತು ಅಗತ್ಯವಾಗಿ ಬೇಕಾದುದನ್ನು ಸಿದ್ಧವಸ್ತುಗಳನ್ನಾಗಿ ಮಾಡಲು ಹೊರಟರು. ಇದು ಕೇವಲ ಫ್ರಾನ್ಸ್‌ನಲ್ಲಿ ನಡೆದ ಘಟನೆ ಅಲ್ಲ ಇಡೀ ಪ್ರಪಂಚ ನಿರ್ಮಾಣಗೊಂಡ ರೀತಿ ಎಂದು ತಿಳಿಯಬಹುದಾಗಿದೆ.

ಬೋವಾ ತಿಳಿಸುವಂತೆ ಹೆಣ್ಣು ಮಾರ್ಪಟ್ಟ ರೀತಿಯನ್ನು ವಿವರಿಸುತ್ತಾಳೆ. 'ಗಂಡಸು ಅನ್ಯವನ್ನು ಹೊರತು ಪಡಿಸಿ ತನ್ನನ್ನು ತಾನು ಕುರಿತು ಚಿಂತಿಸಲಾರ. ಜಗತ್ತನ್ನು ಆತ 'ದ್ವಿದಾ-ಬಾರದಲ್ಲೇ ಗ್ರಹಿಸುತ್ತಾನೆ. ಆತನ ಗ್ರಹಿಕೆಯ ಜಗತ್ತಿನ ಈ ಎರಡು ಹೋಳುಗಳಲ್ಲಿ ಲಿಂಗಬೇಧವಿಲ್ಲ. ತಾನಲ್ಲದ ಇನ್ನೊಂದು ತನ್ನಂತೆ ಗಂಡಸಲ್ಲ ಎಂಬ ಅರಿವಿರುವುದರಿಂದ ಆ ಅನ್ಯದಲ್ಲಿ ಹೆಂಗಸನ್ನು ಸಂಸರ್ಗಗೊಳಿಸಲು ಗಂಡಸು ಮುಂದಾದ. ಹೀಗಾಗಿ ಹೆಣ್ಣು ಅನ್ಯವ್ಯಾಪ್ತಿಗೆ ಬಂದಳು.''[13] ಅನ್ಯಲಿಂಗವೆಂಬ ತೀರ್ಮಾನ ಮೂಡಿ ಬಂದದ್ದು ಪ್ರಜ್ಞೆಯ ಸ್ಥಿತಿಯಲ್ಲಿಯೋ ಅಪ್ರಜ್ಞೆಯ ಸ್ಥಿತಿಯಲ್ಲಿಯೋ ಎಂಬ ರೀತಿಯು ಗೊಂದಲಕ್ಕೆ ಆಸ್ಪದ ಮಾಡಿಕೊಟ್ಟರೂ ''ಪ್ರಜ್ಞೆಯಾಳದಲ್ಲಿದ್ದ ತುಡಿತಗಳು ಕ್ರಮೇಣ ತನಗರಿವಿಲ್ಲದಂತೆಯೆ ಹೆಣ್ಣನ್ನು ಅನ್ಯಲಿಂಗವಾಗಿ ಮಾಡಲ್ಪಟ್ಟಿದೆ'' ಎಂಬುದು ಸಾಬೀತಾಗುವ ಕ್ರಮವನ್ನು ತಿಳಿಯಬಹುದು.

ಲೋಕದಲ್ಲಿ ಹೆಣ್ಣು ವೈರುಧ್ಯಗಳ ಜೊತೆ ತನ್ನ ಅನನ್ಯತೆಯನ್ನು ಹುಡುಕಾಟ ಮಾಡಿಕೊಳ್ಳುವ ವಿಧಾನವನ್ನು ತಿಳಿಯಬಹುದು. ಪ್ರಪಂಚದಲ್ಲಿ ಹೆಣ್ಣನ್ನು ಗ್ರಹಿಸಿದ ರೀತಿಗಳು ಬೇರೆ ಬೇರೆ ಆದವು. ಬೋವಾ ಹೆಣ್ಣನ್ನು ಗ್ರಹಿಸಿದ ಬಗ್ಗೆ ಕಲವು ಮಾಹಿತಿ ನೀಡಿದ್ದಾಳೆ. ಬ್ಯಾಬಲೋನಿಯರಿಗೆ ಸಾಗರ ಗುಂಡಾಗಿದ್ದರೆ ಸಮುದ್ರ ಹೆಣ್ಣೆನಿಸುತ್ತದೆ. ಬೇರೆ ಬೇರೆ ಸ್ಥಳಗಳಲ್ಲಿ ಹೆಣ್ಣು ಕಂಡು ಬಂದ ರೀತಿಯನ್ನು ಬೋವಾ ಚರ್ಚೆ ಮಾಡುತ್ತಾಳೆ. ದೇವತೆಯಾಗಿ, ರಾಕ್ಷಸಿಯಾಗಿ, ತಾಯಾಗಿ, ಬೇರೆ ಬೇರೆ ರೀತಿಯಲ್ಲಿ ಹೆಣ್ಣು ಸೂಸದಲ್ಲಿ ಮಹಾಮಾತೆಯ ವಿಗ್ರಹ ಉದ್ದ ಕೂದಲನ್ನು ತೊಟ್ಟಿದೆ. ಇನ್ನಿತರ ವಿಗ್ರಹಗಳು ಕಿರೀಟ ಧರಿಸಿವೆ. ಹೆಣ್ಣು ಯಾವ ರೀತಿಯಲ್ಲಿ ಕಂಡು ಬಂದರೂ ಹೆಣ್ಣನ್ನು ಆಕೆಯ ವ್ಯಕ್ತಿತ್ವವನ್ನು ಗುರುತಿಸಿಕೊಳ್ಳಬಹುದಾಗಿದೆ.

ಭಾರತದಲ್ಲಿಯೂ ಸಹ ಹೆಣ್ಣನ್ನು ಆದಿಶಕ್ತಿ, ಮಹಾಮಾಯೆ, ಎಲ್ಲವನ್ನು ಪೊರೆಯುವವಳು, ವಾತ್ಸಲ್ಯಮಯಿ ಎಂದು ಹೇಳುವಂತೆಯೆ ಆಕೆಯನ್ನು ರಾಕ್ಷಸಿ, ಕ್ರೂರಳು, ಚಂಚಲೆ ಎಂದು ಪಟ್ಟಿಯನ್ನು ಅಂಟಿಸುವ ಕ್ರಮ ಇಂದೂ ಸಹ ಮುಂದುವರೆದಿದೆ. ''ಲೋಕ ಹೆಣ್ಣನ್ನು ಗ್ರಹಿಸಿದ ಬಗೆಯೇ ಹೆಣ್ಣನ್ನು ಹೆಣ್ಣಾಗಿ ಮಾಡಲ್ಪಟ್ಟಿತು ಎಂದು ತಿಳಿಯಬಹುದು.''

ಮದುವೆ ಎನ್ನುವ ಅಂಶ ಸಮಾಜದಲ್ಲಿ ಹೆಣ್ಣಿಗೆ ಮತ್ತೆ ಮತ್ತೆ ಹೆಣ್ಣು ಎಂದು ನೆನಪು ಮಾಡುವ ಗಂಡಿಗೆ ಪ್ರತಿಷ್ಠೆಯನ್ನು ಉಂಟುಮಾಡುವ ಸಂಗತಿ ಎಂದಾಯಿತು. ಮದುವೆಗೆ ಗಂಡಿನ ಕಡೆಯಿಂದ ಮಹತ್ವದ ಸ್ಥಾನವಿದೆ. ಮದುವೆ ಎನ್ನುವುದು ಆತನ ಸ್ಥಾನವನ್ನು ವಿಸ್ತಾರಗೊಳಿಸುತ್ತಿತ್ತು. ಕುಲವೆಂಬುದು ಬೆಳೆಯುತ್ತಿತ್ತು. ಆಸ್ತಿಯ ಹಕ್ಕು, ಒಡೆತನ, ಕುಟುಂಬ ವ್ಯವಸ್ಥೆ ಹೀಗೆ ಹೊಸ ಸ್ಥಾನವನ್ನು, ಪ್ರತಿಷ್ಠೆಯನ್ನು ತಂದುಕೊಟ್ಟಂತಹ ಸ್ಥಿತಿಯನ್ನು ಈ ಮೂಲಕ ಗಮನಿಸಬಹುದು. ಮಾನವ ಚರಿತೆ ಪಿತೃ ಪ್ರಧಾನ ನೆಲೆಯೊಳಗೆ ಹೇಗೆ ಬೆರೆತು ಬೇರೂರಿ ಹೋಯಿತೆಂಬುದನ್ನು ಗಮನಿಸಬಹುದು.

ಪಿತೃ ಪ್ರಧಾನ ವ್ಯವಸ್ಥೆಯ ಕಾಲದಲ್ಲಿ ಖಾಸಗಿ ಆಸ್ತಿಯ ಉಗಮ ಎಂಬ ಸ್ಥಿತಿಯು ಸ್ಥಾನಪಲ್ಲಟವನ್ನುಂಟು ಮಾಡಿತು. ಕುಟುಂಬ ಒಡೆತನ ಎಂಬ ಸ್ಥಿತಿಯು, ಉತ್ತರಾಧಿಕಾರ, ಎಲ್ಲವೂ ವ್ಯವಸ್ಥೆಯ ವ್ಯವಸ್ಥಿತ ಮನಸಿನ ಜೊತೆ ನಿರ್ದಿಷ್ಟ ಚೌಕಟ್ಟನ್ನು ನಿರ್ಮಾಣ ಮಾಡಿತು. ಬೋವಾ ಗಮನಿಸಿದ್ದು ಮಹಿಳೆಯರಿಗೆ ಚರಿತ್ರೆಗಳೇ ಇಲ್ಲ. ಇದ್ದರೂ ಅವು ಕಳೆದುಹೋಗಿದೆ.[14] ಎಂಬುದನ್ನು ಆ ರೀತಿ ಆರಂಭ ಮಾಡಿದ ಆಕೆಯ ಚಿಂತನೆ ವಿಸ್ತಾರತೆಯನ್ನು ಪಡೆದುಕೊಂಡು ಸಾಗಿತು. ಚರಿತ್ರೆ ಮಾನವರಿಂದ ಸಾಗುತ್ತಿದ್ದರೂ ಮಾನವೀಯ ಮೌಲ್ಯಗಳು ಅಲ್ಲಲ್ಲಿ ಕರಗಿ ಕಟ್ಟುವ, ನಿರ್ಮಾಣ ಮಾಡುವ ರೀತಿಯನ್ನು ಕಾಣಬಹುದಾಗಿದೆ.

ಮನುಷ್ಯ ಬುದ್ಧಿಜೀವಿ, ಚಿಂತನೆ ಮಾಡಲು ಸಾಧ್ಯವುಳ್ಳ ವ್ಯಕ್ತಿ ಎಂದು ಅರಿತಿದ್ದರೂ ಚರಿತ್ರೆಯಲ್ಲಿ ಅಮಾನವೀಯವಾಗಿ ಘಟಿಸಿದ ಘಟನೆಗಳು ಸಾಕಷ್ಟಿವೆ. ಕೆಲವು ಘಟನೆಗಳನ್ನು ಬೋವಾ ಉದಾಹರಣೆ ನೀಡುವುದರ ಮೂಾಲಕ ವಿವರಿಸಿದ್ದಾಳೆ. ಬಹುಪತ್ನಿತ್ವ, ಹೆಂಡತಿಯನ್ನು ತೊರೆಯುವುದು ಸಹಜವಾಗಿ ಎಲ್ಲಾ ಜನಾಂಗಗಳಲ್ಲೂ ಕಂಡು ಬಂದಿತು. ಎಕ್ಲೇಸಿಯಸ್ಟಸ್ ಹೆಣ್ಣಿನ ಬಗೆಗಿನ ತಿರಸ್ಕಾರದಿಂದ ಹೀಗೆಂದಿದ್ದಾನೆ. ''ಹೆಣ್ಣು ಸಾವಿಗಿಂತಲೂ ಹೆಚ್ಚು ಕಹಿಯಾದವಳು, ಅವಳೆದೆಯಲ್ಲಿ ಬಲೆಗಳಿವೆ. ಬೋನುಗಳಿವೆ. ಅವಳ ಕೈಗಳು ಕಟ್ಟುವ ಹಗ್ಗಗಳು ಇಂಥ ಗಂಡಸರು ಸಾವಿರದಲ್ಲಿ ಒಬ್ಬರಾದರೆ ನಾನು ನೋಡಿದ ಎಲ್ಲಾ ಹೆಂಗಸರೂ ಇಂಥವರೇ.[15]

ಹೆಣ್ಣು ಹೇಗೆ ಮಾರ್ಪಟ್ಟಿದ್ದಾಳೆ, ಪುರುಷ ಪ್ರಧಾನ ಚಿಂತನೆಯಲ್ಲಿ ಆಕೆಯನ್ನು ಕಾಣುವ ಕ್ರಮ ಎಲ್ಲವನ್ನು ಈ ಎಕ್ಲೇಸಿಯಸ್ಟಸ್ ಇಡೀ ವಿಶ್ವಾತ್ಮಕ ಸಂದರ್ಭವನ್ನು ಗ್ರಹಿಸಿದ

ಬೋವಾ ಹೆಣ್ಣಿನ ಸ್ಥಿತಿಗತಿಗಳ ಬಗ್ಗೆ ಚರ್ಚೆ ಮಾಡುತ್ತಾ ರಷ್ಯಾ, ಈಜಿಪ್ಟ್, ಗ್ರೀಕ್, ಸ್ಪಾರ್ಟ್ ಹೀಗೆ ಹತ್ತು ಹಲವು ಪ್ರದೇಶಗಳಲ್ಲಿ ಹೆಣ್ಣಿನ ಸ್ಥಾನ ಹೇಗಿತ್ತೆಂಬುದನ್ನು ವಿವರಿಸುತ್ತಾ ಹೆಣ್ಣು ಬೇರೆ ಬೇರೆ ಸ್ಥರಗಳಲ್ಲಿ ಹೇಗೆ ತನ್ನ ಪಾತ್ರವನ್ನು ನಿಭಾಯಿಸುತ್ತಾ ಚರಿತ್ರೆಯೊಳಗೆ ಬೆರೆತು ಹೋದ ಸಂದರ್ಭವನ್ನು ವಿವರಿಸುತ್ತಾಳೆ.

**ಪೆರಿಕ್ಲಸ್ :** '' ಗಂಡು ಯಾವ ಹೆಣ್ಣಿನೊಡನೆ ಕನಿಷ್ಠ ಮಾತನಾಡುತ್ತಾನೋ ಆಕೆಯೇ ಉತ್ತಮ ಹೆಂಗಸು'' ಎನ್ನುತ್ತಾನೆ.

**ಪ್ಲೇಟೋ :** ಹೆಣ್ಣುಮಕ್ಕಳಿಗೆ ಮುಕ್ತಶಿಕ್ಷಣ ನೀಡಬಹುದೆಂಬ ವಿಷಯವನ್ನು ಎತ್ತಿಕೊಂಡು ವ್ಯಂಗ್ಯವಾಡುತ್ತಾನೆ. ಹೆಂಡತಿ ಮನೆಯನ್ನು ಜತನ ಮಾಡಬೇಕು. ಅಚ್ಚುಕಟ್ಟಾಗಿರಬೇಕು, ದುಂದು ಮಾಡಬಾರದು, ಜೇನು ಹುಳದಂತೆ ಸದಾ ದುಡಿಯುತ್ತಿರಬೇಕು, ಆದರ್ಶ ಮನೆವಾರ್ತೆಯವಳಾಗಬೇಕು.''[16] ಹೀಗೆ ಹಿಂದಿನ ಕಟ್ಟಿಕೊಂಡು ಬಂದ ಚರಿತ್ರೆಯನ್ನು ಮುಂದುವರೆಸುತ್ತಾನೆ. ಸಂಕಥನವನ್ನು ಮುರಿಯುವ ಪ್ರಯತ್ನಕ್ಕೆ ಕೈಹಾಕದೆ ಕಟ್ಟುವ ಬೆಳೆಸುವ ಹೆಣ್ಣನ್ನು ಮತ್ತಷ್ಟು ಒತ್ತಡಕ್ಕೆ ಸಿಲುಕಿಸುವ ಸಂದರ್ಭಗಳೆ ನಡೆಯುತ್ತದೆ.

ಹೆಣ್ಣಿಗಿದ್ದ ಎರಡು ಹಾದಿಗಳನ್ನು ಬೋವಾ ಈ ರೀತಿ ಹೇಳುತ್ತಾಳೆ.

1. ತನ್ನ ಅಜ್ಜ ಮುತ್ತಜ್ಜಿಯವರ ಕಾಲದ ಮೌಲ್ಯಗಳನ್ನು ವ್ರತದಂತೆ ಕಾಲದ ಮೌಲ್ಯಗಳನ್ನು ವ್ರತದಂತೆ ಪಾಲಿಸುವುದು.

2. ಇಲ್ಲವೇ ಅವೆಲ್ಲವನ್ನು ಗಾಳಿಗೆ ತೂರಿ ಬದುಕುವುದು.[17]

ಮೇಲಿನ ಸಾಲುಗಳು ಹೆಣ್ಣಿಗಿದ್ದ ಸ್ಥಿತಿಯನ್ನು ನಿರ್ಧರಿಸುತ್ತದೆ. ಚರಿತ್ರೆ ಆರಂಭವಾದಾಗಿನಿಂದ ಆಕೆ ಎದುರಿಸಿದ ಸಂದರ್ಭಗಳಿಗೆ ದೊರೆತ ಗಟ್ಟಿ ಉತ್ತರವೆಂದೆ ಹೇಳಬಹುದು.

ಕ್ರೈಸ್ತಧರ್ಮದಲ್ಲಿ ಹೆಂಡತಿ ಗಂಡನಿಗೆ ಎಲ್ಲಾ ರೀತಿಯಲ್ಲೂ ಅಧೀನ ಎಂಬ ಮಾತಿದೆ. ದೇಹವನ್ನು ಶಾಪವೆಂದು ಪರಿಗಣಿಸದ ಧರ್ಮವು ಹೆಂಗಸರೆಂದರೆ, ಸೈತಾನನು ಒಡ್ಡುವ ಭಯಾನಕ ಆಮಿಷವೆಂದು ಆಮಿಷವೆಂದು ಪರಿಗಣಿಸುತ್ತದೆ. ಹೆಣ್ಣಾಳುಗಳೇ ನೀವು

ಸೈತಾನನಲ್ಲಿಗೆ ಕರೆದೊಯ್ಯುವ ಹಾದಿಗಳು.ಸೈತಾನನು ನೇರವಾಗಿ ಯಾರ ವಿರುದ್ಧ ಹೋರಾಟಕ್ಕಿಳಿಯಲಾರನೋ ಅಂಥವರನ್ನೂ ನೀವು ದಾರಿ ತಪ್ಪಿಸುತ್ತೀರಿ ನಿಮ್ಮ ತಪ್ಪಿನಿಂದಾಗಿಯೇ ದೇವಪುತ್ರನು ಮೃತ ಹೊಂದಿದನು. ನೀವು ಸದಾ ಹರಿದ ಬಟ್ಟೆಯುಟ್ಟು ಶೋಕತಪ್ತರಾಗಿರಬೇಕು'' ಎಂದು ಟೆರೆಟ್ಯುಲಿಯನ್ ಸಂತ ಆಮ್ರೋಸ್ ಹೀಗೆ ಹೇಳುತ್ತಾನೆ.

ಮಿಲ್ಟನ್‌ನ ಪ್ಯಾರಡೈಸ್‌ಲಾಸ್ಟ್‌ನ ಈವ್ ಮತ್ತು ಆಡವ್‌ನಕೃತ್ಯಕ್ಕೆ ಈವ್ ಪ್ರಚೋದಕಳು. ಎಲ್ಲಾ ಪಾಪ ಕೂಪಕ್ಕೆ ಹೆಣ್ಣು ಕಾರಣ ಎಂಬ ವಿಷಯವು ಚರಿತ್ರೆಯಲ್ಲಿ ಸತತವಾಗಿ ಪುನರುಕ್ತಿಯಾಗಿರುವ ಸಂದರ್ಭವನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬಹುದು.

ಜೆಸ್ಟಿನಿಯನ್ ರೂಪಿಸಿದ ಶಾಸನ ಹೆಣ್ಣನ್ನು ಪತ್ನಿ ಮತ್ತು ಮಾತೆ ಎಂದು ಗೌರವಿಸಿದರೂ, ಆ ಸ್ಥಾನಗಳ ಕರ್ತವ್ಯಗಳು ಅವಳು ಸದಾ ಬದ್ಧಳಾಗಿರಬೇಕೆಂದು ವಿಧಿಸುತ್ತಿದೆ.14 ಹೆಣ್ಣಿಗಿರುವ ಮಿತಿ ಹೇರಿಕೆಯ ಬಗ್ಗೆ ನಿರ್ದಿಷ್ಟ ಸಂಬಂಧಗಳನ್ನು ಆರೋಪಿಸಿ ಅವಳನ್ನು ನಡೆಸಿಕೊಳ್ಳುವ ಸಂದರ್ಭಗಳ ಬಗ್ಗೆ ಚಿಂತನೆಯ ಅಗತ್ಯವಿದೆ.

ಮಧ್ಯಯುಗದಲ್ಲಿ ಹದಿನಾರನೇ ಶತಮಾನದಲ್ಲಿ ಜಾರಿಗೆ ಬಂದ ಕೆಲವು ಕಾನೂನುಗಳು ಬಹುಕಾಲದವರೆಗೆ ಹಾಗೇ ಮುಂದುವರೆದವು. ಊಳಿಗಮಾನ್ಯ ವ್ಯವಸ್ಥೆಯ ವಿಧಾನಗಳು ಮಾಯವಾದವು. ಗಂಡ ಈಗ ಹೆಂಡತಿಯನ್ನು ಒಲೆಯ ಮುಂದೆ ಬಿದ್ದಿರುವಂತೆ ಹೇಳುದನ್ನು ಯಾರು ತಡೆಯುವಂತಿರಲಿಲ್ಲ. ಈ ಕಟ್ಟಳೆಗಳು ಹೆಂಗಸನ್ನು ''ಪುರುಷವಲಯಗಳಿಂದ'' ದೂರವಿಟ್ಟವು.20 ನಿರ್ದಿಷ್ಟ ವ್ಯವಸ್ಥೆಯೊಳಗೆ ಏರ್ಪಟ್ಟ ಕಟ್ಟಳೆಗಳನ್ನು ಮೀರುವ ಪ್ರಯತ್ನಕ್ಕಾಗಿ ಹೋರಾಟ ಅನಿವಾರ್ಯವಾಯಿತು. ಮಧ್ಯಯುಗದಲ್ಲಿ ಗಂಡಸರು ಹೆಂಗಸರ ಬಗ್ಗೆ ತಿರಸ್ಕಾರದ ಮನೋಭಾವ ಹೊಂದಿದ್ದ ಸಂದರ್ಭದ ಬಗ್ಗೆ ಬೋವಾ ಸುಧಾರಣೆ ಎಂಬುದು ಅಗತ್ಯ।ವೆಂಬ ಮಾತನ್ನು ಚರ್ಚೆ ಮಾಡಿದ್ದಾಳೆ.

ಹದಿನೇಳನೇ ಶತಮಾನದಲ್ಲಿ ಬಿಡುವಿದ್ದ ಹೆಂಗಸರು ಕಲೆ ಮತ್ತು ಸಾಹಿತ್ಯದಲ್ಲಿ ತೊಡಗಿಕೊಂಡರು. ಸಮಾಜ ಉನ್ನತಸ್ತರಕ್ಕೆ ಸಂಸ್ಕೃತಿಯು ವ್ಯಾಪಿಸುತ್ತಿದ್ದಂತೆ ಅಲ್ಲಿನ ಗೋಷ್ಠಿಗಳಲ್ಲಿ ಈ ಹೆಂಗಸರ ಪಾತ್ರ ಹಿರಿದಾಯಿತು. ತಮ್ಮನ್ನು ತಾವು ನಿರಂತರವಾಗಿ ತೊಡಗಿಸಿ ಹೊರಟಾಗ ಹೆಣ್ಣಿನ ಸಾಮರ್ಥ್ಯ ಸಾರ್ಥಕ್ಯ ಪಡೆದುಕೊಳ್ಳುತ್ತದೆ.

ರೂಸೋ ಹೇಳಿದ ಸಾಂಪ್ರದಾಯಿಕ ಜಡ್ಡುಗಟ್ಟಿದ ಹೆಣ್ಣಿನ ಸ್ಥಿತಿಗೆ ವಾಲ್ಟೇರ್ ಹೆಂಗಸರಿಗಾದ ಅನ್ಯಾಯಕ್ಕೆ ಟೀಕೆ ಮಾಡಿದ. ಸುಧಾರಣೆಯ ಗಾಳಿ ಬೀಸತೊಡಗಿದಾಗ ಎಂದಿಗೂ ಪ್ರಸ್ತುತವಾಗುವಂತ ಹೆಣ್ಣಿನ ಸಂದರ್ಭವನು ಸುಧಾರಣೆ ಮಾಡದ ಮಾತುಗಳನ್ನಾಡಿದ ಕಂಡೊರ್ಸ್ ಮಾತುಗಳನ್ನು ನೆನೆಯಬಹುದು. ಉತ್ತಮ ಶಿಕ್ಷಣ ಪಡೆದ ಹೆಣ್ಣುಗಳು ಗಂಡಸರಿಗೆ ಸರಿಸಮನಾಗುವರೆಂದೂ ಅವರು ಹೆಚ್ಚು ಹೆಚ್ಚು ರಾಜಕೀಯ ಜೀವನದಲ್ಲಿ ಪಾಲ್ಗೊಳ್ಳಬೇಕೆಂದು.[21] ಅಭಿಪ್ರಾಯ ಪಟ್ಟದ್ದು ಕಾಲಕ್ಕೆ ಕಾಲದ ಒತ್ತಡಕ್ಕೆ ನೀಡುವ ಉತ್ತರದಂತಿದೆ. ಚರಿತ್ರೆಯಲ್ಲಿ ಹೆಣ್ಣು ಹೆಣ್ಣಾಗಿ ಹೇಗೆ ನಿರ್ಮಾಣಗೊಂಡಳೆನ್ನುವುದನ್ನು ಇಲ್ಲಿ ಗಮನಿಸಬಹುದು. ಆಯಾ ಕಾಲದ ಒತ್ತಡಗಳು ಹೆಣ್ಣಿಗೆ ತಂದು ಕೊಟ್ಟ ಸ್ಥಾನ ಎಂತದ್ದು ಎಂಬ ಅಂಶ ಮುಖ್ಯವಾಗುತ್ತದೆ.

ಇಲ್ಲಿಯವರೆಗೂ ಚರ್ಚೆ ಮಾಡಿದ ಎಲ್ಲಾ ಅಂಶಗಳೂ ಚಾರಿತ್ರಿಕ ಬೆಳವಣಿಗೆ ಬೋವಾ ಕಂಡುಕೊಂಡಂತಹ ಮಾದರಿ ಎಂತದ್ದು ಎಂದು ತಿಳಿದಂತಿದೆ. ಆದರೆ ಕೇವಲ ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗದೆ ಎಲ್ಲೆಡೆಗೆ ಸಾರ್ವತ್ರಿಕವಾಗಿ ಅನ್ವಯವಾಗುವಂತಹ ಮಾನವೀಯ ಮೌಲ್ಯಗಳನ್ನು ಹುಡುಕಾಟ ಮಾಡುವ, ಮಾನವ ಚರಿತ್ರೆಯನ್ನು ಕಟ್ಟುವ ಪ್ರಯತ್ನ ಸಾಗಿದೆ. ಘಟಿಸುವ ಘಟನೆಗಳು ಚರಿತ್ರೆಯನ್ನು ಕಟ್ಟುವಾಗ ಆಗಿರುವಂತಹ ಮಾರ್ಪಾಡುಗಳು ಎಂಥಹದ್ದು ಎಂದು ಗಮನಿಸಲು ಸಾಧ್ಯವಾಗಿದೆ.

**ಸಾಮಾಜಿಕ ರಾಜಕೀಯ ಹಿನ್ನೆಲೆಯಲ್ಲಿ ಸ್ತ್ರೀವಾದ**

ಸಾಮಾಜಿಕ/ರಾಜಕೀಯ ಸಂದರ್ಭಗಳು ಹೆಣ್ಣಿನ ಸ್ಥಿತಿಯನ್ನು ಬೋವಾಳ ಚರ್ಚೆಯ ಜೊತೆಗಿಟ್ಟು ನೋಡುವ ಮೂಲಕ ಬದಲಾವಣೆಯ ಅಗತ್ಯತೆಗಳನ್ನು ಈ ಮೂಲಕ ಚರ್ಚೆ ಮಾಡಬಹುದಾಗಿದೆ. ಚರಿತ್ರೆಯಿಂದ ಗಮನಹರಿಸಿದರೆ ಹೆಣ್ಣು ಶ್ರಮಜೀವಿಯ, ಕುಟುಂಬದ ಒಳಗೂ ಹೊರಗೂ ದುಡಿಯಲು ಸಮರ್ಥಳು ಎಂಬ ಅಂಶ ಸಾಬೀತಾಗಿದೆ. ಆರ್ಥಿಕ ಸ್ವಾವಲಂಬನೆ ಹೆಣ್ಣಿಗೆ ಒಂದು ನೆಲೆಯನ್ನು ತಂದುಕೊಡುತ್ತದೆ. ಸಮಾಜದಲ್ಲಿ ಹೆಣ್ಣನ್ನು ತಾನು ಹೇಗೆ ತೊಡಗಿಸಿದ್ದಾಳೆಂಬ ಅಂಶವನ್ನು ಗಮನಿಸಬೇಕು. ಆಸ್ತಿಯ ಹಕ್ಕು ಪುರುಷರಿಗೆ ಮಾತ್ರ ಸೀಮಿತವಾಗಿದ್ದ ಸಂದರ್ಭ ಹೆಣ್ಣನ್ನು ಮತ್ತು ಶೋಷಣೆಗೆ ಗುರಿ ಮಾಡಿತು. ಆದರೆ ಕ್ರಿ.ಶ. ೧೭೯೦ರಲ್ಲಿ ಹಿರಿಯ ಗಂಡುಮಗನಿಗೆ ಮಾತ್ರ ಆಸ್ತಿಯ ಹಕ್ಕು

ಎಂಬ ಕಾನೂನು ಅಳಿಸಿ ಹಾಕಲಾಯಿತು. ಹುಡುಗರು, ಹುಡುಗಿಯರೂ ಆಸ್ತಿಯ ವಿಚಾರಕ್ಕೆ ಸಮಾನರು [22] ಎಂಬ ಕಾನೂನು ಸ್ವಲ್ಪಮಟ್ಟಿಗಿನ ಸುಧಾರಣೆ ತಂದಿತು.

ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಮಧ್ಯಮವರ್ಗದಲ್ಲಿ ಆದ ತಲ್ಲಣ ಹೆಣ್ಣಿನ ತಳಮಳಗಳನ್ನು ಹೆಚ್ಚಾಗುವಂತೆ ಮಾಡಿದವು. ಹೆಂಗಸು ಮನೆಗೆ ತಕ್ಕವಳೇ ಹೊರತು ರಾಜಕಾರಣಕ್ಕಲ್ಲ ಸಾರ್ವಜನಿಕ ಸಮಾರಂಭಗಳಲ್ಲಿ ಭಾಗಿಯಾಗುವ ಬದಲು ಮನೆಯಲ್ಲಿದ್ದು ಕೆಲಸ ಪೂರೈಸಲು ಹೇಳಿದರು. ಬಾಲ್ಜಾಕ್ ತನ್ನ '' ಫಿಸಿಯಾಲಜಿ ದು ಮ್ಯಾರಿಯೇಜ್'' ಕೃತಿಯಲ್ಲಿ''........ ಆಕೆ ಸೇವಕಿ, ಸರಿಯಾಗಿ ಹೇಳಬೇಕೆಂದರೆ ಗಂಡಿಗೆ ಉಪಕಾರಕಳಾಗಿರಬೇಕು. ಮಧ್ಯಮವರ್ಗದ ಸ್ತ್ರೀವಿರೋಧಿ ಧೋರಣೆಯನ್ನು ಸಮರ್ಥಿಸುವ ಜೊತೆಗೆ, ಹದಿನೆಂಟನೇ ಶತಮಾನದಲ್ಲಿ ಆಕೆಗೆ ದೊರಕಿದ್ದ ಮುಕ್ತ ರಹದಾರಿ ಮತ್ತು ತನ್ನ ಕಾಲದ ಪ್ರಗತಿ ವಿಚಾರಗಳಿಗೆ ಪ್ರತಿಕ್ರಿಯಿಸಿದ್ದಾನೆ.'' ಬೂರ್ಜ್ವಾ ಮದುವೆಗಳಲ್ಲಿ ಪ್ರೀತಿಯ ಬಂಧವಿಲ್ಲದಿದ್ದರೆ ಅಲ್ಲಿ ಹಾದರಕ್ಕೆ ಕಾರಣಗಳು ಹುಟ್ಟುತ್ತವೆ ಎಂದು ಹೇಳಿದ. ಗಂಡಂದಿರು ಕಡಿವಾಣಗಳನ್ನು ಹಿಡಿದು ಹಂಡತಿಯರಿಗೆ ಶಿಕ್ಷಣ ಮತ್ತು ಸಂಸ್ಕೃತಿಗಳ ಸಂಪರ್ಕ ದೊರೆಯದಂತೆ ನೋಡಿಕೊಳ್ಳಬೇಕೆಂದು ಅವರನ್ನು ಸಾಕಷ್ಟು ಅಂದಗೆಟ್ಟವರಂತೆ ಇರಿಸಬೇಕೆಂದು ಹೇಳಿದ [23] ಈ ರೀತಿಯ ಮಾತುಗಳು ಆದಿಮ ಕಾಲದಿಂದಲೂ ಪಿತೃಪ್ರಧಾನ ಚಿಂತನಾ ಧೋರಣೆಗಳಲ್ಲಿ ಮುಳುಗಿರುವವರು ಚರಿತ್ರೆಯ ಸಂಕಥನದ ಮಾತುಗಳು ಅಪ್ರಜ್ಞಾಪೂರ್ವಕ ಸ್ಥಿತಿಯಲ್ಲೇ ಹರಿದು ಬರುತ್ತಿದೆ ಎನ್ನುವುದಕ್ಕೆ ಸಾಕ್ಷಿಯಾಗಿದೆ. ಹದಿನೆಂಟನೇ ಶತಮಾನದ ಸಾಮಾಜಿಕ ಮನಸ್ಥಿತಿಯನ್ನು ವಿವರಿಸುವಂತಿದೆ.

ಹತ್ತೊಂಬತ್ತನೇ ಶತಮಾನದ ಸುಧಾರಣಾ ಚಳುವಳಿಗಳು ಇಡೀ ವಿಶ್ವದಲ್ಲಿ ಮಾನವೀಯ ಮೌಲ್ಯಗಳ ಸಾರುವ ಕಾರ್ಯ ಕೈಗೊಂಡವು. ಸಮಾಜದಲ್ಲಿ ಸಹಜ ಪ್ರಕ್ರಿಯೆಯಾಗಿ ಹೊಸ ರೀತಿಯಲ್ಲಿ ಸಮಾಜವನ್ನು ಗ್ರಹಿಸುವ ದಾರಿಯನ್ನು ತೆರೆಯಿತು. ಸ್ತ್ರೀಪರ ಹೋರಾಟ ಚಳುವಳಿಗಳು ಆಕೆಯನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನಗಳು ನಡೆಯುತ್ತಲೇ ಹೋದವು. ಆದರೆ ಕೈಗಾರಿಕಾ ಕ್ರಾಂತಿ ಹೆಣ್ಣಿಗೆ ದುಡಿಯುವ ರಹದಾರಿಯನ್ನು ತೋರಿಸಿಕೊಟ್ಟಿತು. ಆರ್ಥಿಕ ಸ್ವಾವಲಂಬನೆಯ ಮೂಲಕ ಸಮಾಜದಲ್ಲಿ ಪ್ರಮುಖ ಸ್ಥಿತಿಗೇರಲು ಸಾಧ್ಯವಿದೆ ಎಂಬ ಸತ್ಯ। ಮನಗಂಡಿತು. ಕೇವಲ ಅಡುಗೆ ಮನೆಯ

ನಾಲ್ಕುಗೋಡೆಯ ಮಧ್ಯವಿದ್ದ ಹೆಂಗಸು ಅಲ್ಲಿಂದ ಹೊರಬಂದು ದುಡಿಯುವ ಹಾಗೆ ಅವಕಾಶಗಳು ಏರ್ಪಟ್ಟಿತು.

ಬೋವಾ ನೀಡುವ ಮಾಹಿತಿಯಂತೆ ಒಲೆಗೆ ಅಂಟಿಕೊಂಡಿರುವ ಬದಲು ಆಕೆ ಹೊಸ ಉತ್ಪಾದನಾ ವ್ಯವಸ್ಥೆಯ ಭಾಗವಾದಳು. ಈ ಪಲ್ಲಟಕ್ಕೆ ಯಂತ್ರಗಳೇ ಕಾರಣ. ಏಕೆಂದರೆ ಗಂಡು ಮತ್ತು ಹೆಣ್ಣುಗಳ ನಡುವೆ ಇದ್ದ ದೈಹಿಕ ಬಲದ ವ್ಯತ್ಯಾಸ ಯಂತ್ರಗಳೆದುರು ಮುಖ್ಯವಾಗಲಿಲ್ಲ. ಕೈಗಾರಿಕೆಗಳು ಬೆಳೆಯುತ್ತಿದ್ದಂತೆ ಬಲು ಬೇಗ ಹೆಚ್ಚು ದುಡಿಮೆಗಾರರು ಬೇಕಾಯಿತು. ಗಂಡಸರು ಅಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲದ ಕಾರಣ ಹೆಂಗಸರ ಅಗತ್ಯ ಹೆಚ್ಚಾಯಿತು. ಹತ್ತೊಂಬತ್ತನೇ ಶತಮಾನದ ಕೈಗಾರಿಕಾ ಕ್ರಾಂತಿ ಹೆಂಗಸರ ಸ್ಥಿತಿಗತಿಗಳನ್ನು ಬದಲಿಸಿ ಅವರಿಗೆ ಹೊಸಯುಗದ ಬಾಗಿಲನ್ನು ತೆರೆಯಿತು.

ಭಾರತದ ಸಂದರ್ಭದಲ್ಲಿಯೂ ಸಹ ಪಾರತಂತ್ರ್ಯವಿದ್ದರೂ ಬ್ರಿಟೀಷರ ಆಡಳಿತ, ಇಂಗ್ಲೀಷ್ ಭಾಷೆಮಯ ಜ್ಞಾನ, ಮುದ್ರಣಯಂತ್ರ ಇಂಗ್ಲೆಂಡಿನಲ್ಲಿ ಘಟಿಸಿದ ಕೈಗಾರಿಕಾ ಕ್ರಾಂತಿಯ ಪರಿಣಾಮ ಸಮಾಜಸುಧಾರಕರು, ಸಮಾನತೆಗಾಗಿ ನಡೆಸಿದ ಹೋರಾಟ ಮಹಿಳೆಯರಿಗೆ ಹೊಸ ಹಾದಿಯನ್ನೇ ತೆರೆದ ಸತ್ಯ ಎಲ್ಲರಿಗೂ ತಿಳಿದಿದೆ. ಪಿತೃಪ್ರಧಾನ ವ್ಯವಸ್ಥೆಯಲ್ಲೇ ಅಡಗಿದ್ದ ಎಷ್ಟೋ ಮಹಿಳೆಯರಿಗೆ ವಿಮೋಚನೆ ದೊರೆತಂತಾಯಿತು. ಚಾರಿತ್ರಿಕವಾಗಿ ಸೋಲು ಕಂಡಂತ ಹೆಣ್ಣು, ದೈಹಿಕವಾಗಿ ಅಧೀನವಾದ ಹೆಣ್ಣು ಸ್ವಾವಲಂಬಿಯಾಗದ ಹೆಣ್ಣು, ಹೆಣ್ಣಾಗಿ ಮಾರ್ಪಟ್ಟ ಹೆಣ್ಣು ದೈಹಿಕ ಬಲಾಬಲಗಳಿಗಿಂತ ಸೋಲನ್ನು ಕಂಡಂತ ಹೆಣ್ಣು ಇವರೆಲ್ಲರು ಸಂಘಟಿತ ಶಕ್ತಿಗಳಾಗಿ ಒಂದಾಗಲು ಸಹಕಾರವಾದದ್ದು ಸಮಾಜದಿಂದ ಎಂದೇ ಹೇಳಬಹುದು.

ಮನೆಗೆಲಸ, ಬೆವರು ಸುರಿಸುವಂತೆ ದುಡಿದರೂ ಅನನ್ಯತೆಯಿಲ್ಲದ ನಿಷ್ಪ್ರಯೋಜಕ ಜೀವನ ನಡೆಸುತ್ತಿದ್ದ ಹೆಣ್ಣಿನ ಚಿತ್ರಣಗಳು ನಮಗೆ ಹದಿನೆಂಟು / ಹತ್ತೊಂಬತ್ತನೇ ಶತಮಾನದಲ್ಲಿ ಸರ್ವೇಸಾಮಾನ್ಯವಾಗಿ ಕಾಣಬರುತ್ತಿದ್ದಂತಹ ಸ್ಥಿತಿ. ಹತ್ತಿ, ಉಣ್ಣೆ ಮತ್ತು ರೇಶಿಮೆ ಕೈಗಾರಿಕೆಗಳಲ್ಲಿ ಹೆಂಗಸರಿಗೆ ಬೇಕಾದಷ್ಟು ಅವಕಾಶಗಳು ತೆರೆದುಕೊಂಡವು. ನೂಲು ಬಟ್ಟೆ ನೇಯುವ ಕೆಲಸ, ಹೆಂಗಸರನ್ನು ಹೆಚ್ಚಾಗಿ ತೊಡಗಿಸಲಾಯಿತು. ಮಾಲಿಕರು ಗಂಡಸರಿಗಿಂತ ಹೆಂಗಸರನ್ನೇ ಈ ಕೆಲಸಗಳಿಗೆ ಬಯಸುತ್ತಿದ್ದರು. ಕಡಿಮೆ ಹಣ ಪಡೆದು ಹೆಂಗಸರು ಚೆನ್ನಾಗಿ ದುಡಿಯುತ್ತಾರೆ'. ಈ ಹೇಳಿಕೆಯು ಹೆಂಗಸರ ಶ್ರಮ ಜೀವನದ ಹಿಂದಿನ

ನಾಟಕವನ್ನು ಬಯಲಿಗಿಡುತ್ತದೆ.[24] ಇಲ್ಲಿ ಶ್ರಮವಿಭಜನೆ, ಕೂಲಿಎನ್ನುವ ಅಂಶಗಳು ನಮಗದೆ ಮಾರ್ಕ್ಸ್‌ವಾದಗಿ ಚಿಂತನೆಯನ್ನು ನೆನಪಿಗೆ ತರುತ್ತದೆ.

೧೮೩೧ರಲ್ಲಿ ರೇಶಿಮೆ ಕೆಲಸಗಾರರು ಬೇಸಿಗೆಯಲ್ಲಿ ಬೆಳಗಿನ ಮೂರು ಗಂಟೆಯಿಂದ ರಾತ್ರಿ ಕತ್ತಲಾಗುವವರೆಗೆ ಚಳಿಗಾಲದಲ್ಲಿ ಬೆಳಿಗ್ಗೆ ಐದರಿಂದ ರಾತ್ರಿ ಹನ್ನೊಂದರವರೆಗೆ ಹೀಗೆ ಸುಮಾರು ಹದಿನೇಳು ಗಂಟೆ ದಿನವೂ ದುಡಿಯಬೇಕಿತ್ತು.[25] ಶ್ರಮಕ್ಕೆ ದೊರೆಯುತ್ತಿದ್ದಂತಹ ಪ್ರತಿಫಲ ಕಡಿಮೆಯಾಗಿತ್ತು. ಮತ್ತೊಂದು ಹೋರಾಟಕ್ಕೆ ನಾಂದಿಯಾದದ್ದು ಶ್ರಮ, ದುಡಿಮೆ, ಮಾಲಿಕರು ಮತ್ತು ಶ್ರಮಿಕರ ನಡುವಿನ ತಾರತಮ್ಯದ ಸ್ಥಿತಿ. ಕೂಲಿ ಎಲ್ಲವೂ ಮಾರ್ಕ್ಸ್‌ವಾದಿ ಚಿಂತನೆಗೆ ಪ್ರೇರಣೆಯಾಯಿತು.

'ದಾಸ್ ಕ್ಯಾಪಿಟಲ್' ನಲ್ಲಿ ಮಾರ್ಕ್ಸ್ ಟಿಪ್ಪಣಿಯೊಂದನ್ನು ಬರೆಯುತ್ತಾ ಹೀಗೆ ಹೇಳುತ್ತಾನೆ. ಮಿಸ್ಟರ್ ಇ ಎಂಬ ಮಾಲಿಕರು ತನ್ನ ಯಂತ್ರಮಗ್ಗಗಳ ಕೆಲಸಕ್ಕೆ ಮದುವೆಯಾದ ಹೆಂಗಸರನ್ನು ನೇಮಿಸಿಕೊಳ್ಳಲು ಬಯಸುವುದಾಗಿ ಹೇಳಿದ. ಅದರಲ್ಲೂ ಮನೆಯಲ್ಲಿ ಅವರು ಸಾಕಬೇಕಿದ್ದ ಕುಟುಂಬವಿದ್ದವರಿಗೆ ಮೊದಲ ಆದ್ಯತೆ. ಏಕೆಂದರೆ ಇಂಥವರು ಮಾತ್ರ ತಗ್ಗಿ ಬಗ್ಗಿ ದುಡಿಯುತ್ತಾರೆ. ಏಕೆಂದರೆ ತಮ್ಮ ಕುಟುಂಬದ ಪೋಷಣೆ ಅಗತ್ಯವಾದುದನ್ನು ಸಂಪಾದಿಸಬೇಕು ಎಂಬುದು ಅವರ ಗುರಿಯಾಗಿರುತ್ತದೆ.'' ಮಾಲೀಕನ ಈ ಮಾತಿಗೆ ಪ್ರತಿಕ್ರಿಯೆ ನೀಡುತ್ತಾ ಮಾರ್ಕ್ಸ್ ಹೀಗೆ ಹೇಳುತ್ತಾನೆ. ''ಹೆಂಗಸಿನ ಸ್ವಭಾವಗಳೇ ಅವರಿಗೆ ಅಡ್ಡಿಯಾದವು. ಅವಳ ನೈತಿಕ ಪ್ರಜ್ಞೆ ಮತ್ತು ಮೃದು ಸ್ವಭಾವಗಳು ಮತ್ತು ಅವಳ ಅಧೀನತೆಗೆ ಸಂಕಟಗಳಿಗೆ ಕಾರಣವಾದವು.[26] ಸ್ತ್ರೀವಾದಕ್ಕೆ ಪೂರಕವಾದ ಆಶಯವನ್ನು ಮಾರ್ಕ್ಸ್ ತನ್ನ ಮೂಲಕ ತೋರಿಸಲು ಆರಂಭಿಸಿದ್ದು ಸ್ತ್ರೀವಾದ ಇಂದು ದೊಡ್ಡ ಕಲ್ಪನೆಯಾಗಿ ಬೆಳೆಯಲು ಸಾಧ್ಯವಾಗಿದೆ.

ಬೋವಾ ನೀಡುವ ಮಾಹಿತಿಯಂತೆ ಸ್ತ್ರೀ ಶ್ರಮದ ಹಕ್ಕುಗಳ ಬಗ್ಗೆ ಮೊದಲ ಬೇಡಿಕೆಯನ್ನು ನವೆಂಬರ್ 2, 1892ರಲ್ಲಿ ತಯಾರಿಸಲಾಯಿತು. ಅದರ ಪ್ರಕಾರ ಹೆಂಗಸರು ರಾತ್ರಿ ಕೆಲಸ ಮಾಡುವಂತೆ ಇರಲಿಲ್ಲ. ಹಗಲಲ್ಲಿ ನಿರ್ದಿಷ್ಟ ಅವಧಿಯ ದುಡಿಮೆ ಮಾತ್ರ ನಿಗಧಿಯಾಗಬೇಕಿತ್ತು. ೧೯೦೦ ರಲ್ಲಿ ದಿನದ ದುಡಿಮೆಯನ್ನು ಹತ್ತು ಗಂಟೆಗಳಿಗೆ ನಿಗದಿಗೊಳಿಸಲಾಯಿತು. ೧೯೦೫ರಲ್ಲಿ ವಾರಕ್ಕೊಮ್ಮೆ ದಿನ ರಜೆ ನೀಡಬೇಕೆಂದು ಕಡ್ಡಾಯ ಮಾಡಲಾಯಿತು. ೧೯೦೭ರಲ್ಲಿ ದುಡಿಯುವ ಹೆಣ್ಣು ತನ್ನ ಸಂಪಾದನೆಯನ್ನು ತಾನೇ

ಬಳಸುವ ಹಕ್ಕು ಪಡೆದಳು. ೧೯೧೦ರಲ್ಲಿ ಹೆರಿಗೆ ಸಂದಗರ್ಭದ ಸಂಬಳ ಸಹಿತ ರಜೆಯ ಸೌಲಭ್ಯ ದೊರಕಿತು. ೧೯೧೩ರಲ್ಲಿ ಹೆರಿಗೆಯ ಮೊದಲಿನ ಮತ್ತು ಆನಂತರದ ವಿರಾಮದ ಅವಧಿಯನ್ನು ಖಚಿತಗೊಳಿಸಲಾಯಿತು.

ಈ ರೀತಿಯಾಗಿ ಬಂದ ಕಾನೂನು ಸಹಾಯಗಳು ಹೆಣ್ಣಿಗೆ ಅನುಕೂಲಕರವಾಗಿದ್ದರೂ ಬೇರೆ ರೀತಿಯ ಒತ್ತಡಗಳು ಹೆಚ್ಚಾಗುವಂತಾಯಿತು. ಕುಟುಂಬ ನಿರ್ವಹಣೆ ಹೊರಗಿನ ದುಡಿಮೆ ಶ್ರಮ ಪಡುತ್ತಿದುದು ತನ್ನ ಕುಟುಂಬಕ್ಕಾಗಿಯಾದರೂ ಅದನ್ನು ಗ್ರಹಿಸುವ ಮನಸ್ಸು ಇರಲಿಲ್ಲ. ಸಾಮಾಜಿಕವಾಗಿ, ಕೌಟುಂಬಿಕವಾಗಿ ಕಷ್ಟಕರ ಸಂದರ್ಭ ಎದುರಾಯಿತು. ಆದರೂ ಆರ್ಥಿಕವಾಗಿ ಸ್ವಾವಲಂಬಿಯಾಗಿ ಬದುಕುವ ಸ್ಥಿತಿಯು ಸ್ವಲ್ಪ ಮಟ್ಟಿಗೆ ಹೆಣ್ಣಿನ ಸಂದರ್ಭವನ್ನು ಸುಧಾರಿಸಿತು.

ಗಂಡಸು ದಿನದ ದುಡಿಮೆಗೆ ಪಡೆಯುತ್ತಿದ್ದ ಸಂಬಳದ ಅರ್ಧದಷ್ಟು ಮಾತ್ರ ಅಷ್ಟೇ ದುಡಿಮೆಗೆ ಹೆಂಗಸಿಗೆ ಸಿಗುತ್ತಿತ್ತೆಂದು ೧೮೮೯-೯೩ರ ಒಂದು ಅಧ್ಯಯನ ತಿಳಿಸುತ್ತದೆ. ೧೯೧೮ರಲ್ಲಿ ಅಮೇರಿಕಾದ ಹೆಂಗಸು ಗಂಡಸಿನ ಅರ್ಧದಷ್ಟು ವೇತನ ಪಡೆಯುತ್ತಿದ್ದಳು. ಅದೇ ಸುರಾರಿನ ಜರ್ಮನಿಯಲ್ಲಿ ಗಣಿ ಕೆಲಸ ಮಾಡುತ್ತಿದ್ದ ಹೆಂಗಸರು ಗಂಡಸಿನಷ್ಟೇ ಅಗೆದು ತೆಗೆಯುತ್ತಿದ್ದಷ್ಟೇ ಕಲ್ಲಿದ್ದಲಿಗೆ ಪಡೆಯುತ್ತಿದ್ದ ಸಂಬಳ ೨೫% ಭಾಗ ಕಡಿಮೆ ೧೯೧ರಿಂದ ೧೯೪೩ರವರೆಗೆ ಫ್ರಾನ್ಸ್‌ನಲ್ಲಿ ಹೆಂಗಸಿನ ಸಂಬಳವನ್ನು ಹೆಚ್ಚಿಸುತ್ತಾ ಬಂದರೂ ಅದು ಯಾವಾಗಲೂ ಗಂಡಸಿನ ಸಂಬಳಕ್ಕಿಂತ ಕಡಿಮೆ ಆಗಿರುತ್ತಿತ್ತು. ಈ ಎಲ್ಲಾ ಕಷ್ಟಗಳ ನಡುವೆಯೂ ಹೆಣ್ಣು ತನ್ನ ಕಾರ್ಯದಲ್ಲಿ ತಾನು ತೊಡಗಿಕೊಂಡು ಜೀವನೋಪಾಯ ಗಳನ್ನು ಕಂಡುಕೊಂಡು ಸಮಾಜವನ್ನು ನಿರ್ಮಾಣ ಮಾಡುವ, ಚರಿತ್ರೆಯನ್ನು ಕಟ್ಟುವ ಕಾರ್ಯದಲ್ಲಿ ತನ್ನನ್ನು ತಾನು ಅರ್ಪಿಸಿಕೊಂಡಿದ್ದನ್ನು ಮರೆವಂತಿಲ್ಲ.

ಬೋವಾ ನೀಡಿರುವ ಮಾಹಿತಿ ಅಂಕಿ ಅಂಶಗಳ ಬೇರೆ ಬೇರೆ ವೃತ್ತಿಯಲ್ಲಿ, ಪ್ರದೇಶಗಳ ತೊಡಗಿಸಿಕೊಂಡ ೧೯೦೦ರಲ್ಲಿ ಫ್ರಾನ್ಸ್‌ನ ಒಂಬತ್ತು ಲಕ್ಷ ಹೆಂಗಸರು ಬಟ್ಟೆ ಹೊಲೆಯುವುದು ಚರ್ಮ ಸಾಮಗ್ರಿ ತಯಾರಿಕೆ, ಮಣಿಸರ ಮಾಡುವುದು, ಬ್ಯಾಗುಗಳನ್ನು ಹೊಲೆಯುವುದು ಮುಂತಾದ ಕೆಲಸ ಮಾಡುತ್ತಿದ್ದರು. ಆದರೆ ನಂತರದಲ್ಲಿ ಅವರ ಸಂಖ್ಯೆ ಕಡಿಮೆಯಾಗುತ್ತಾ ಬಂದಿದೆ. ೧೯೦೬ ರಲ್ಲಿ ದುಡಿಯುವ ವಯೋಮಾನದ ಹೆಂಗಸರ (೮ರಿಂದ ೬೦) ಶೇಕಡ ೪೨ ಜನರು ಕೃಷಿ, ಕೈಗಾರಿಕೆ, ವ್ಯಾಪಾರ, ಬ್ಯಾಂಕಿಂಗ್, ಇನ್ಸುರೆನ್ಸ್,

ಕಛೇರಿ ಕೆಲಸ ಮತ್ತು ಶೈಕ್ಷಣಿಕ ವೃತ್ತಿಗಳಲ್ಲಿ ತೊಡಗಿದ್ದರು. ಕಳೆದ ಯುದ್ಧಕ್ಕೆ ಮೊದಲು ನಡೆದ ಜನಗಣತಿಯಂತೆ ೧ ರಿಂದ ೬೦ ವಯಸ್ಸಿನ ಹೆಂಗಸರಲ್ಲಿ ಫ್ರಾನ್ಸ್‌ನಲ್ಲಿ ಶೇಕಡ ೪೨ ಫಿನ್‌ಲೆಂಡ್‌ನಲ್ಲಿ ಶೇಕಡ ೩೭, ಜರ್ಮನಿಯಲ್ಲಿ ಶೇ. ೩೪.೨ ಇಂಡಿಯಾದಲ್ಲಿ ಶೇಕಡ ೨೭.೭ ಇಂಗ್ಲೇಂಡ್‌ನಲ್ಲಿ ಶೇ. ೨೬ ಹಾಲೆಂಡ್‌ನಲ್ಲಿ ಶೇ. ೧೯ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಶೇಕಡಾ ೧೭.೭ ಕೆಲಸಗಾರರಿದ್ದರು. ಹೀಗೆ ಮಹಿಳೆಯರು ತಮ್ಮನ್ನು ತಾವು ಕೆಲಸಗಳಲ್ಲಿ ತೊಡಗಿಸಿಕೊಂಡು ಸಮಾಜದ ಏಳಿಗೆಗೆ ಮಹಿಳೆಯರು ತಮ್ಮ ಕೊಡುಗೆ ನೀಡಿದ್ದಾರೆ.

ಸಮಾಜದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಹೆಂಗಸರಿಗೆ ನಿಸರ್ಗ ಎಸೆವ ಸವಾಲು ಆಕೆಯ ಜೈವಿಕ ಬದಲಾವಣೆಗಳು ವಂಶೋತ್ಪಾದನೆ ಮತ್ತು ದುಡಿಮೆ ಇವುಗಳ ನಡುವೆ ಸಮತೋಲನ ಕಾಯ್ದುಕೊಳ್ಳುವಂತೆ ಮಾಡುವ ಹೊಣೆ ಹೆಣ್ಣಿನ ಮೇಲೆ ಬಿದ್ದಿರುವುದನ್ನು ಮರೆಯುವಂತಿಲ್ಲ. ಬೋವಾ ವಂಶೋತ್ಪಾದನೆಯನ್ನು ಮೂಲ ಸಮಸ್ಯೆ ಎಂದೇ ಹೇಳುತ್ತಾಳೆ. ಹೆರುವ ಹೆಣ್ಣಿಗೆ ಆಕೆಯ ದೇಹದಲ್ಲಿ ಕಳೆದುಕೊಳ್ಳುವ ಸಾಮರ್ಥ್ಯವನ್ನು ಮತ್ತೆ ಗಳಿಸಲು ಕಾಲಾವಕಾಶದ ಅಗತ್ಯತೆ ಇದೆ. ನಿರಂತರ ದುಡಿಮೆ ಹೆಣ್ಣನ್ನು ಕುಗ್ಗಿಸುತ್ತದೆ. ಹೆಣ್ಣಿಗೆ ಹೆರುವ ಸಾಮರ್ಥ್ಯ ಬಂದಾಗಿನಿಂದ ಹೆರುವ ಶಕ್ತಿ ಕಳೆದುಕೊಳ್ಳುವವರೆಗೆ ಎಷ್ಟಾದರೂ ಹೆರಬಹುದು. ನಿರಂತರ ಬಸಿರು, ಬಾಣಂತನ, ಋತುಸ್ರಾವ, ಹಾರ್ಮೋನುಗಳ ಅಸಮತೋಲನ ಹೆಣ್ಣಿನ ಉತ್ಸಾಹಕ್ಕೆ ಕಡಿವಾಣ ಹಾಕುತ್ತದೆ. ಗರ್ಭನಿರೋಧಕ, ಕುಟುಂಬ ಯೋಜನೆ ಇವುಗಳ ಬಗ್ಗೆ ಮಾಹಿತಿಯಿಲ್ಲದ ಗುಪ್ತವಾಗಿಡುವ ಸಂದರ್ಭಗಳು ಹೆಣ್ಣಿನ ಸಾಮರ್ಥ್ಯದ ಪ್ರಮಾಣವನ್ನು ಕಡಿಮೆ ಮಾಡಿ ಸಮಾಜದಲ್ಲಿ ಆಕೆಯ ಕ್ರಿಯಾಶೀಲ ಪಾಲ್ಗೊಳ್ಳುವಿಕೆಗೆ ನಿಯಂತ್ರಣವನ್ನು ತಂದೊಡ್ಡುತ್ತದೆ.

ಪುರಾತನ ಕಾಲದಲ್ಲಿ ಗರ್ಭನಿರೋಧಕಗಳಿದ್ದುದರ ಬಗೆಗಿನ ಮಾಹಿತಿಯನ್ನು ಬೋವಾ ನೀಡುತ್ತಾಳೆ. ಹೆಂಗಸರು ಅವುಗಳನ್ನು ಬಳಸುತ್ತಿದುದರ ಬಗ್ಗೆಯೂ ಮಾಹಿತಿ ಲಭಿಸಿದೆ. ಕ್ರಿ.ಪೂ. ೨೦೦೦ದ ಉಲ್ಲೇಖವಿದೆ. ಹೆರುವ ಹೆಣ್ಣುಗಳು ಹೆರುವಂತ ಸಂದರ್ಭ ಒಂದೆಡೆಯಾದರೆ 'ಗರ್ಭಪಾತ'ಎನ್ನುವುದು ಸಮಾಜದಲ್ಲಿ ಸಂದಿಗ್ಧತೆ ಮೂಡಿಸಿದಂತ ಸ್ಥಿತಿಯಾಗಿತ್ತು. ೧೫೫೬ರ ಎರಡನೆಯ ಹೆನ್ರಿಯ ಶಾಸನವೊಂದು ಗರ್ಭಪಾತವು ಅಪರಾಧವೆಂದು ಅದಕ್ಕೆ ಮರಣದಂಡನೆ ಶಿಕ್ಷೆ ಎಂದು ಹೇಳುತ್ತದೆ. ೧೭೯೧ರ

ಕಾನೂನೊಂದು ತಾಯಿಯನ್ನು ಶಿಕ್ಷಿಸದೆ ಗರ್ಭಪಾತಕ್ಕೆ ನೆರವಾದವರನ್ನು ಅಪರಾಧಿಗಳೆಂದು ಪರಿಗಣಿಸಿತು. ೧೮೧೦ರ ಪ್ರೆಂಚ್ ಕಾನೂನು ಇದಕ್ಕೆ ಕಠಿಣ ಶಿಕ್ಷೆಗಳನ್ನು ಸೂಚಿಸಿ ಪೂರ್ಣ ನಿಷೇಧ ಹೇರಿತು.[26] ಹೀಗೆ ನಿಸರ್ಗದ ಸಹಜ ಕ್ರಿಯೆಗಳಿಗೆ ಮನುಷ್ಯ ಕಲ್ಪಿಸಿಕೊಳ್ಳುವ ಅಪವಾದಗಳು ಚರಿತ್ರೆಯಲ್ಲಿ ಸಾಕಷ್ಟು ಅಡಗಿದೆ. ಮನುಷ್ಯನ ಅಸ್ಥಿತ್ವವನ್ನೇ ಅಲುಗಾಡಿಸುವ ದಾರಿತಪ್ಪಿಸುವ ಕೆಲಸ ನಡೆದು ಹೋಗುತ್ತದೆ.

ಸವೆದ ಹಳೆಕಾಲದ ಮೌಲ್ಯಗಳು, ಪೂರ್ವಾಗ್ರಹಗಳು, ಮುಕ್ತಜ್ಞಾನವಿಲ್ಲದ ಸಂದರ್ಭ ಮನುಷ್ಯನ ದಿಕ್ಕುಗೆಡಿಸಿವೆ. ಮೂಢನಂಬಿಕೆ ಅಜ್ಞಾನಗಳು ವಿಶ್ವವ್ಯಾಪಿಯಾಗಿ ಆಯಾ ವಾತಾವರಣಕ್ಕೆ ತಕ್ಕಂತೆ ಬೇರೆ ಬೇರೆಯಾದರೂ ಸಾಮಾಜಿಕವಾಗಿ ಮೌಲ್ಯಗಳನ್ನು ಕುಸಿದಂತೆ ಮಾಡಿದೆ. ವಿವಾಹ, ಸಂಬಂಧಗಳ ಜಟಿಲತೆ, ಅನೈತಿಕತೆ, ವಿಚ್ಛೇಧನ ಇವೆಲ್ಲವೂ ಸಮಾಜದ ಸ್ವಾಸ್ಥ್ಯಕ್ಕೆ ವ್ಯತಿರಿಕ್ತವಾದ ಪರಿಣಾಮವನ್ನು ತನಗರಿವಿಲ್ಲದಂತೆಯೆ ಉಂಟುಮಾಡಿತ್ತು.

ಸುವರ್ಟ್‌ಮಿಲ್ ಇಂಗ್ಲೀಷ್ ಪಾರ್ಲಿಮೆಂಟಿನಲ್ಲಿ ೧೮೬೭ರಲ್ಲಿ ಹೆಂಗಸರಿಗೆ ಮತದಾನದ ಹಕ್ಕು ನೀಡಬೇಕೆಂದು ಮೊದಲ ಬಾರಿಗೆ ಪ್ರತಿಪಾದಿಸಿದ. ಆಕೆ ಕುಟುಂಬದೊಳಗೆ ಗಂಡ ಹೆಂಡಿರಿಗೆ ಸಮಾನತೆ ಸಾಧಿತವಾಗಬೇಕೆಂದೂ, ಅದು ಇಡೀ ಸಮಾಜದಲ್ಲಿಯೂ ಇರಬೇಕೆಂದು ತನ್ನ ಬರಹಗಳಲ್ಲಿ ಹೇಳಿದ್ದಾನೆ. 'ಒಂದು ಲಿಂಗ ಸಮೂಹವನ್ನು ಇನ್ನೊಂದು ಲಿಂಗ ಸಮೂಹಕ್ಕೆ ಅಧೀನಗೊಳಿಸುವ ಸಾಮಾಜಿಕ ಪದ್ಧತಿಯ ಕೆಟ್ಟದ್ದು. ಇದು ಮಾನವ ಪ್ರಗತಿಗೆ ಹಾಕಿದ ಮುಖ್ಯ ತಡೆಯಾಗಿದೆ. ಎರಡು ಲಿಂಗ ಸಮೂಹಗಳಿಗೂ ಸಮಾನ ಅವಕಾಶಗಳನ್ನು ಪಡೆಯಬೇಕೆಂದು ನಂಬಿದ್ದೇನೆ''.[27] ಈ ರೀತಿಯ ಲಿಂಗ ಸಮಾನತೆಯನ್ನು ಬಯಸುವ ಸಂದರ್ಭ ಅನ್ಯಲಿಂಗವೆಂದು ಹೆಣ್ಣನ್ನು ಕಾಣದ ಕ್ರಮದ ಚಿಂತನೆ ಸಮಾಜಕ್ಕೆ ಅತ್ಯಗತ್ಯವಾಗಿ ಬೇಕು.

೧೮೭೯ರ ಸೋಷಿಯಲಿಸ್ಟ್ ಕಾನ್ಫರೆನ್ಸ್ ಲಿಂಗ ಸಮಾನತೆಯನ್ನು ಘೋಷಿಸಿತು. ಬಿಡುಗಡೆಯ ಆಶಯವನ್ನು ಕಾಣಬಹುದು. ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡುತ್ತಿದ್ದ ಅಂಶಗಳೆಡೆಗೆ ಗಮನಹರಿಸಿದರು. 'ಪಾನನಿರೋಧ ಅಶ್ಲೀಲ ಸಾಹಿತ್ಯ ಇವುಗಳೇ ಮುಂತಾದ ಸುಧಾರಣೆಯನ್ನು ಬಯಸುತ್ತಿದ್ದರು. ೧೮೯೨ರಲ್ಲಿ ನಡೆದ ಫೆಮಿನಿಸ್ಟ್ ಕಾಂಗ್ರೆಸ್‌ನಿಂದ ಚಳುವಳಿಗೂ ಅದೇ ಹೆಸರೆ ಬಂದಿತು. ೧೯೦೧ರಲ್ಲಿ ಹೆಂಗಸರ ಮತದಾನದ ಪ್ರಶ್ನೆ

ಮೂಡಿತು.28 ಮತದಾನ ಎನ್ನುವ ಕಲ್ಪನೆ ಮನುಷ್ಯ ನಿರ್ಮಾಣ ಮಾಡಿಕೊಂಡದ್ದು. ಹಕ್ಕು, ಮತದಾನ, ರಾಜಕೀಯ ಸ್ಥಾನಮಾನ ಮೇಲ್ಪದರಕ್ಕೆ ಸಂಬಂಧಿಸಿದ್ದು ಎನ್ನಬಹುದು. ಆದರೆ ಮಾನಸಿಕವಾದ ಸಮಾನತೆ, ಅನ್ಯವಲ್ಲದ ಲಿಂಗವೆಂದು ಹೆಣ್ಣನ್ನು ಭಾವಿಸಿ ನೋಡುವ ರೀತಿ ಅತ್ಯಗತ್ಯವಾದುದು.

೧೯೩೨ರಲ್ಲಿ ಚೇಂಬರ್ ಮತ್ತು ಸೆನೆಟ್‌ಗಳಲ್ಲಿ ಈ ದೀರ್ಘಚರ್ಚೆ ನಡೆದವು. ಅರ್ಧಶತಮಾನಕಾಲ ಮೆರೆದಿದ್ದ ಎಲ್ಲಾ ಸ್ತ್ರೀ ವಿರೋಧಿವಾದಗಳು ಮರುಮಂಡನೆಯಾದವು. ಹೆಂಗಸಿಗೆ ಉನ್ನತ ಸ್ಥಾನ ಈಗಾಗಲೇ ದೊರೆತಿದೆಯೆಂದು ಆಕೆ ಅಲ್ಲೇ ಇರುವುದು ಸೂಕ್ತವೆಂದು ಶ್ರೀಮಂತರು ನುಡಿದರು. ''ನಿಜವಾದ ಹೆಂಗಸು'' ಮನೆಯೊಳಗೆ ಇರಬೇಕೆಂದು ಮತದಾನ ನೀಡಲು ಹೊರಗೆ[29] ಬಂದು ತನಗಿರುವ ಪ್ರತಿಭೆಯನ್ನು ಕುಂದಿಸಿಕೊಳ್ಳಬಾರದೆಂದೂ ಹೇಳಿದರು. ಬಹಳ ಸೂಕ್ಷ್ಮವಾದ ಉತ್ತರದ ಮೂಲಕ ಹೆಣ್ಣಿನ ಸ್ಥಾನವನ್ನು ಕದಲದಂತೆ ಮಾಡಿತು.

ನ್ಯೂಜಿಲೆಂಡ್ ೧೮೯೩ರಲ್ಲಿ ಹೆಂಗಸರಿಗೆ ಎಲ್ಲಾ ಹಕ್ಕುಗಳನ್ನು ನೀಡಿದವು. ಆಸ್ಟ್ರೇಲಿಯಾದಲ್ಲಿ ೧೯೦೩ರಲ್ಲಿ ಹಕ್ಕು ನೀಡಲಾಯಿತು ಎಂದು ಬೋವಾ ಮತದಾನದ ಹಕ್ಕಿನ ಬಗ್ಗೆ ಚರ್ಚೆ ಮಾಡುತ್ತಾಳೆ. ೧೯ನೇ ಶತಮಾನದವರೆಗೆ ಸ್ತ್ರೀವಾದ ಕೆಳದನಿಯಲ್ಲಿತ್ತು. ಆದರೆ ಇಷ್ಟೆಲ್ಲಾ ಜೈವಿಕ ಚಾರಿತ್ರಿಕ, ಸಾಮಾಜಿಕ, ಹಿನ್ನೆಲೆ ಹೆಣ್ಣಿಗೆ ಹೊಸ ದನಿಯನ್ನು ತಂದುಕೊಟ್ಟಿತು. ಹೋರಾಟವೆಂಬ ಅಂಶ ಮೌನ ಸಂಗ್ರಾಮವಾಗಿದ್ದು ಹೊಸ ರೂಪ ಪಡೆಯ ತಿರುಗಿತು. ಬ್ಯಾನರ್‌ಗಳನ್ನು ಹಿಡಿದು ಮೆರವಣಿಗೆ ಮಾಡುವುದು, ಸಭೆಗಳಲ್ಲಿ ನುಗ್ಗುವುದು, ಬಂಧನಕ್ಕೊಳಗಾಗುವುದು, ಉಪವಾಸ ಕೂರುವುದು, ಈ ರೀತಿಯ ಹೋರಾಟಕ್ಕಿಳಿದ ಹೆಂಗಸರು ಸಮಾನತೆಯ ಹೋರಾಟದ ಕಿಡಿ ಹತ್ತಿಸಿದರು. ಸ್ವೀಡನ್‌ನಲ್ಲಿ ಒಂದು ಮುಖ್ಯ ಸ್ತ್ರೀವಾದಿ ಚಳುವಳಿ ನಡೆದಿತ್ತು. 'ಶಿಕ್ಷಣ, ದುಡಿಮೆ, ಮತ್ತು ಸ್ವಾತಂತ್ರ್ಯಗಳ ಹಕ್ಕನ್ನು ಕೋರಿದರು.[30] ಮತದಾನದ ಹಕ್ಕು ಸಾಮಾಜಿಕ ಸ್ಥಾನಮಾನ, ಆರ್ಥಿಕತೆ ಸ್ವಾವಲಂಬನೆ ಎಂಬ ಅಂಶವು ಇಡೀ ವಿಶ್ವದಲ್ಲಿ ಹೆಣ್ಣಿಗೆ ಹೊಸ ಚೈತನ್ಯ ತಂದುಕೊಟ್ಟಿತು.

ಚರಿತ್ರೆಯನ್ನು ತಿರುವಿಹಾಕಿದರೆ ಪಿತೃಪ್ರಧಾನ ಧೋರಣೆಗಳು ಚರಿತ್ರೆಯನ್ನು ಕಟ್ಟುವ ಕೆಲಸದಲ್ಲಿ ಪುರುಷರದೇ ಸಿಂಹಪಾಲು. ಪುರುಷ ನಿರ್ಮಿತ ಜಗತ್ತಿನಲ್ಲಿ ಹೆಣ್ಣಾಗಿ ಮಾರ್ಪಟ್ಟ ಹೆಣ್ಣು ಹಲವು ರೀತಿಯಲ್ಲಿ ಬಿಡುಗಡೆಯನ್ನು ಬಯಸಿದ್ದಳು. ಬೋವಾ

ತಿಳಿಸುವಂತೆ ಹೆಂಗಸರು ಎಂದು ಸ್ವಾಯತ್ತ ಗುಂಪಾಗಿರಲಿಲ್ಲ, ಎಂದೂ ಚಾರಿತ್ರಿಕವಾಗಿ ಮಹತ್ವದ ಪಾತ್ರ ನಿರ್ವಹಿಸಲು ಮುಂದಾಗಲಿಲ್ಲ. ಹೆಂಗಸಿಗಿರುವ ಬಂಧವೆಂದರೆ ದೇಹ, ಬದುಕು, ಕ್ಷಣಿಕತೆ ಮತ್ತು ಅನನ್ಯತೆ, ಇವೆಲ್ಲವೂ ಗಂಡಸು ಕಲ್ಪಿಸಿದ ತತ್ವಗಳಾಗಿದ್ದು ಎಂದು ಹೆಣ್ಣಿನ ಆಶೋತ್ತರಗಳನ್ನು ಬಿಂಬಿಸಲಿಲ್ಲ. ಬಹುಪಾಲು ಹೆಂಗಸರು ಇವೆಲ್ಲ ನಮ್ಮ ಹಣೆಬರಹ ಎಂದುಕೊಂಡು ಕೈಕಟ್ಟಿ ಕೂರುತ್ತಾರೆ. ಯಾರು ಬದಲಾವಣೆ ತರಲು ಯತ್ನಿಸಿದರೂ ಅವರು ತಮ್ಮ ವಿಶಷ್ಟತೆಯ ಚೌಕಟ್ಟಿನಲ್ಲೇ ಬಂದಿತರಾಗಿ ಅದನ್ನು ಮರುಸ್ಥಖಾಪಿಸಲು ಬಯಸಲಿಲ್ಲ. ಬದಲಿಗೆ ಅದನ್ನು ಮೀರ ಬಯಸಿದರು. ಅದು ಗಂಡಸಿನ ಒಪ್ಪಿಗೆಯಿಂದಾಗಿ ಮತ್ತು ಪುರುಷ ಪರಿಪ್ರೇಕ್ಷ್ಯದಲ್ಲಿ ಮಾತ್ರ.

ಬೋವಾಳ ಈ ಗ್ರಹಿಕೆಯನ್ನು ಮುಂದುವರಿಸುವುದಾದರೆ ಅಸಹಾಯಕತೆ ಹಾಕಿಕೊಡುವ ಚೌಕಟ್ಟು ಬದಲಾವಣೆಯನ್ನು ತರಲು ಹೊರಟವರಿಗೆ (ಹೆಣ್ಣಿಗೆ) ಮಿತಿಯಾಗುತ್ತಿತ್ತು. ಆಕೆಯ ಸಂದರ್ಭ ಆಕೆ ಎದುರಿಸುತ್ತಿರುವ ಸವಾಲು, ಹತಾಶೆ ಈ ಎಲ್ಲದಕ್ಕೂ ಪ್ರಕ್ರಿಯೆಯಾಗಿ ಉತ್ತರ ನೀಡಲು ಹೊರಟ ಹೆಣ್ಣಿಗೆ ಸಾಂಘಿಕ ಹೋರಾಟ ಮಾಡುವ ಹಾದಿ ಸುಲಭವಾಗಿ ಇರುತ್ತಿರಲಿಲ್ಲ. ಆಕೆಯ ತಲ್ಲಣದ ಸಂದರ್ಭಕ್ಕೆ ವಿರೋಧ ವ್ಯಕ್ತಪಡಿಸುವಲ್ಲಿ ಸೋಲು ಸಹಜವಾಗಿರುತ್ತಿತ್ತು. ಆಕೆ ಸಾರ್ವತ್ರಿಕವಾಗಿ ಹೋರಾಟ ಮಾಡಲು ಬಯಸುತ್ತಿದ್ದರೂ ಅವಳ ಶಕ್ತಿಯೆಲ್ಲ ಉಡುಗುವಂತೆ ಆಗುತ್ತಿತ್ತು. ''ವ್ಯವಸ್ಥೆಯ ಮಧ್ಯದಲ್ಲಿ ಬದುಕುತ್ತಿದ್ದ ಹೆಣ್ಣು ವೈಯಕ್ತಿಕವಾಗಿ ಕುಸಿವ ಸಂದರ್ಭ ಸಹಜವಾಗಿಯೇ ನಿರ್ಮಾಣ ಆಗಿಬಿಡುತ್ತದೆ. ಅದನ್ನು ಮೀರುವ ಪ್ರಯತ್ನವನ್ನು ಹೆಣ್ಣು ಮಾಡಲು ಹೊರಟ ಸಂದರ್ಭದಲ್ಲಿ ಆಕೆ ಒಂಟಿಯಾಗಿ ನಿಂತಿರುತ್ತಾಳೆ. ಆಕೆಯ ಸಂದರ್ಭವು ವೈಯಕ್ತಿಕ ಸಮಸ್ಯೆಗಳ ಆಗರವಾಗುತ್ತದೆ. ಆ ಸಂದರ್ಭವನ್ನು ಮೀರಿ ಸಾಮಾಜಿಕ ಬದಲಾವಣೆಯನ್ನು ಬಯಸುವ ಹೆಣ್ಣು ತನ್ನಲ್ಲೇ ಸಿಲುಕಿಕೊಳ್ಳಬೇಕಾಗುತ್ತದೆ. ಹಾಗೆಯೇ ಸೋಲನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈ ಮಾತು ಹೆಣ್ಣಿನ ಮನೋಚೈತನ್ಯವನ್ನು ಕುಗ್ಗಿಸಲು ಅಲ್ಲ ನಾವು ನಿಂತ ಸಂದರ್ಭವನ್ನು ಗಟ್ಟಿಗೊಳಿಸಿದರೆ ಮುಂದಿನ ಹೆಜ್ಜೆಯನ್ನು ಇಡಲು ಹಾದಿ ಸುಗಮವಾಗುತ್ತದೆ.

ಲಿಂಗತಾರತಮ್ಯದ ನೆಲೆಯಿಂದ ದೂರದಲ್ಲಿ ನಿಂತು ಮಾನವೀಯ ಮೌಲ್ಯಗಳನ್ನು ಅರಗಿಸಿಕೊಂಡು (ಪುರುಷಕೇಂದ್ರಿತ ಮಾನವೀಯ ನೆಲೆಯಲ್ಲಿ) ಸಹಜವಾಗಿಯೇ ಹೆಣ್ಣಾಗಿ

ಮಾರ್ಪಟ್ಟಿರುವ ಸಂದರ್ಭಕ್ಕೆ ಗಟ್ಟಿಯಾಗಿ ಪಕ್ವಗೊಂಡ ಕಾಲದಲ್ಲಿ ಉತ್ತರ ನೀಡುತ್ತಾ ಹೋಗಬೇಕು. ಹೆಣ್ಣು ದಾರಿಯನ್ನು ತಾನೇ ಕಂಡುಕೊಂಡಳೆಂಬ ರೀತಿಯನ್ನು ಬೋವಾ ಹೇಳುತ್ತಾ ಹದಿನೇಳನೇ ಶತಮಾನದ ಕುತೂಹಲಗಳು ಹದಿನೆಂಟನೇ ಶತಮಾನದ ಪ್ರಗತಿಶೀಲ ಆದರ್ಶ ಮುಂತಾದವೆಲ್ಲಾ ಸ್ತ್ರೀತ್ವದ ವಿಸ್ತಾರಕ್ಕೆ ಅನುವು ಮಾಡುವ ವಲಯಗಳಾಗಿದ್ದವು. ಹೀಗಾಗಿ ಹೆಂಗಸು ಕಾವ್ಯದ ಕೇಂದ್ರವಾದಳು. ಕಲೆಯ ವಸ್ತುವಾದಳು. ಮಾನಸಿಕ ವಿಸ್ತಾರದ ಆನಂದದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಅವಳ ವಿರಾಮಕಾಲ ಅವಕಾಶ ನೀಡಿತು. ಬರಹಗಾರರಿಗೆ ಸ್ಪೂರ್ತಿಯಾದಳು. ವಿಮರ್ಶಕಿಯಾದಳು. ಸಾರ್ವಜನಿಕ ಸಂಗಾತಿಯಾದಳು. ಗಂಡಿನ ಪ್ರತಿಸ್ಪರ್ಧಿಯಾದಳು. ಸಂವೇದನಾ ಶೀಲತೆಗೊಂದು ಮಾದರಿಯಾದಳು. ಪುರುಷ ಹೃದಯಗಳಿಗೆ ಉತ್ತೇಜಿತಳಾದಳು. ಹೀಗಾಗಿ ತನ್ನ ದಾರಿಯನ್ನು ತಾನೇ ಕಂಡುಕೊಳ್ಳುವಂತಾದಳು.

## ಅಡಿಟಿಪ್ಪಣಿ

1. ಸಿಮೋನ್ ದ ಬೋವಾ - ದ ಸೆಕೆಂಡ್ ಸೆಕ್ಸ್ - ಒಂದು ಕನ್ನಡ ಓದು
ಡಾ. ಎಚ್.ಎಸ್. ಶ್ರೀಮತಿ, ಪು.ಸಂ-30
2. ಅದೇ ಪುಟ-04
3. ಅದೇ ಪುಟ-07
4. ಅದೇ ಪುಟ-08
5. ಅದೇ ಪುಟ-23
6. ಅದೇ ಪುಟ-24
7. ಅದೇ ಪುಟ-25
8. ಅದೇ ಪುಟ-17
9. ಅದೇ ಪುಟ-61
10. ಅದೇ ಪುಟ-63
11. ಅದೇ ಪುಟ-67
12. ಅದೇ ಪುಟ-75
13. ಅದೇ ಪುಟ-82
14. ಅದೇ ಪುಟ-11
15. ಅದೇ ಪುಟ-69
16. ಅದೇ ಪುಟ-104
17. ಅದೇ ಪುಟ-109
18. ಅದೇ ಪುಟ-112
19. ಅದೇ ಪುಟ-113
20. ಅದೇ ಪುಟ-117
21. ಅದೇ ಪುಟ-125
22. ಅದೇ ಪುಟ-127
23. ಅದೇ ಪುಟ-129
24. ಅದೇ ಪುಟ-132
25. ಅದೇ ಪುಟ-133
26. ಅದೇ ಪುಟ-140
27. ಅದೇ ಪುಟ-143
28. ಅದೇ ಪುಟ-144
29. ಅದೇ ಪುಟ-144
30. ಅದೇ ಪುಟ- 147

# ಅಧ್ಯಾಯ-3

## ಸಿಮೊನ್ ಬೋವಾ ಮತ್ತು ಕನ್ನಡ ಸ್ತ್ರೀವಾದಿ ಚಿಂತನೆ

ಸಿಮೊನ್ ದ ಬೋವಾ ''ದ ಸೆಕೆಂಡ್ ಸೆಕ್ಸ್'' ಕೃತಿಯಲ್ಲಿ ನಡೆಸಿದ ಸುದೀರ್ಘ ಚರ್ಚೆಯ ನಂತರ ಆಕೆಯ ಪ್ರಭಾವ, ಹುಟ್ಟವ ಪ್ರಶ್ನೆಗಳು, ತನ್ನತನದ ಹುಡಕಾಟ, ಅನನ್ಯತೆ, ಸ್ತ್ರೀತ್ವ, ಸ್ತ್ರೀವಾದಿ ಚಿಂತನೆ, ಅಸ್ಮಿತೆ ಇವುಗಳು ಕನ್ನಡ ಸಾಹಿತ್ಯದಲ್ಲಿ ಹೇಗೆ ಕಂಡ ಬಂದಿದೆ ಎಂಬುದನ್ನು ಗಮನಿಸುವುದಾದರೆ ಸ್ತ್ರೀವಾದ ಎನ್ನುವುದು ಅಪ್ರಜ್ಞಾಪೂರ್ವಕವಾಗಿ ಮಾಡಿದ್ದೋ ಘಟಿಸಿದ ಘಟನೆಯೋ, ಪುರುಷವಾದದೆಡೆಗದೆ ಮುಖಮಾಡಿ ನಿಂತ ನೆಲೆಯೋ ಅಥವಾ ಅಘೋಷಿತ ಮೌನ ಸಂಗ್ರಾಮವೋ ಎಂದು ಪ್ರಶ್ನಿಸಿಕೊಂಡರೆ ಇವೆಲ್ಲವೂ ಸರಿ ಎನಿಸುತ್ತದೆ. ಎಲ್ಲಾ ನೆಲೆಗಳು ಸಹ ಸ್ತ್ರೀವಾದಿ ಚಿಂತನೆಗದೆ ಇಂಬುಕೊಟ್ಟವೇ ಎಂಬುದು ಸ್ಪಷ್ಟವಾಗಿದೆ. ದಲಿತ ಸಂಕಥನ ಎನ್ನುವುದು ಸ್ತ್ರೀವಾದಕ್ಕೆ ಪೂರಕವಾಗಿ ಪರಸ್ಪರ ಬಲಕೊಟ್ಟು ಹುಟ್ಟಿಕೊಂಡಿದೆ ಎಂಬುದು ತಿಳಿದಿದೆ. ಸ್ತ್ರೀವಾದ ಎನ್ನುವುದು ಶ್ರೇಷ್ಠತೆ ಎಂಬ ಪರಿಕಲ್ಪನೆಯಾಗಿ ಬೆಳೆದು ನಿಲ್ಲುವ ಶ್ರಮವನ್ನು ತಾತ್ವಕ ನೆಲೆಯಲ್ಲಿ ಕಾಣಲು ಸಾಧ್ಯವಿದೆ.

ಕನ್ನಡ ಸ್ತ್ರೀವಾದದ ತಾತ್ವಿಕ ಆಯಾಮಗಳನ್ನು ಕನ್ನಡ ಚಿಂತನೆಯಲ್ಲಿರುವ ಗಟ್ಟಿತನವನ್ನು ಗಮನಿಸಲು ಕೆಲವು ಅಂಶಗಳ ಮೂಲಕ ಚರ್ಚೆ ಮಾಡಬಹುದು. ಸ್ತ್ರೀವಾದಿ ಚಿಂತನೆ ಇಂದು ಎತ್ತುವ ಸೂಕ್ಷ್ಮ ಚರ್ಚೆಗಳನ್ನು ಸಾಹಿತ್ಯದೊಳಗೆ ಗುರುತಿಸಲು ಸಾಧ್ಯವಿದೆ.

1. ಕನ್ನಡ ಜಾನಪದ ಸಾಹಿತ್ಯದೊಳಗೆ ಹೆಣ್ಣು ಕಂಡು ಬಂದಿರುವ ವಿಧಾನ

2. ವಚನಕಾಲಘಟ್ಟ ಮತ್ತು ಹೆಣ್ಣು

ಹೀಗೆ ಸಾಹಿತ್ಯದಲಿ ಹೆಣ್ಣನ್ನು ಗುರುತಿಸುವ ಕ್ರಮವನ್ನು ಗಮನಿಸಿದಾಗ ಬೋವಾ ಹೇಗೆ ಪ್ರಸ್ತುತಳಾಗುತ್ತಾಳೆ, ಸೈದ್ಧಾಂತಿಕ ಮಾದರಿಯು ಸಾಹಿತ್ಯ ಕ್ರಮದಲ್ಲಿ ಹೇಗೆ ಮಂಡಿತವಾಗುತ್ತದೆ ಎಂಬುದನ್ನು ಕಾಣಲು ಸಾಧ್ಯವಿದೆ. ಜನಪದ ಎನ್ನುವುದು ಒಂದು ದೇಸೀ ಮೂಲದ ಹಾಡುಗಬ್ಬವಾಗಿ ಜನಜನಿತವಾಗಿದೆ. ಸಮಾಜದಲ್ಲಿ ಅಡಗಿರುವ ಎಷ್ಟೋ ಸಂದರ್ಭಗಳು ಸಾಹಿತ್ಯವಾದಾಗ, ಮಾನವೀಯತೆ, ಮೌಲ್ಯಗಳು, ಆ ಮೂಲಕವೇ ಜನಪದರು ಕೊಟ್ಟ ಉತ್ತರಗಳು, ಗಟ್ಟಿತನ, ಸ್ವಂತಿಕೆ ಇವೆಲ್ಲವನ್ನು ನೋಡಬಹುದು.

ಬೋವಾ ವಿವಾಹವನ್ನು ಪರಂಪರೆ ನೀಡಿರುವ ಜವಾಬ್ದಾರಿ ಎನ್ನುತ್ತಾಳೆ. ಪಿತೃಪ್ರಧಾನ ಮೌಲ್ಯಗಳನ್ನು, ಮಾನಸಿಕ ಸ್ಥಿತಿ, ಅದಕ್ಕೆ ಹೆಣ್ಣು ನೀಡುವ ದಿಟ್ಟ ಉತ್ತರ, ಹೀಗೆ ಹಲವಾರು ನೆಲೆಗಳಲ್ಲಿ ಜನಪದ ಪದ್ಯಗಳು ಇರುವುದನ್ನು ಕಾಣಲು ಸಾಧ್ಯವಿದೆ. ಮಾನಸಿಕವಾಗಿ ಪಿತೃಪ್ರಧಾನ ನಿಗಧಿಯಾಗಿ ಸಿದ್ಧಮಾಡವ ಸಾಕಷ್ಟು ಉದಾಹರಣೆಗಳು ನಮ್ಮ ಮುಂದಿವೆ. ವಿವಾಹವೆಂಬ ಸಾಮಾಜಿಕ ಸಂದರ್ಭಕ್ಕೆ ಕಟ್ಟುಬಿದ್ದು ಹೆಣ್ಣಿಗೆ ಮಾನಸಿಕವಾಗಿ ಸಿದ್ಧಮಾಡುವ ಜನಪದರ ಸಾಲುಗಳನ್ನು ಕಾಣಬಹುದು.

''ಅತ್ತಿಯ ಮನಿಯಾಗ ಮುತ್ತಾಗಿ ಇರಬೇಕು,
ಹೊತ್ತಾಗಿ ನೀಡಿದರೆ ಉಣಬೇಕು
ಅತ್ತೆ ಮಾವರಿಗಂಜಿ ಮತ್ತೆ ನಾದನಿಯರಿಗಂಜಿ ನಡೆಯಬೇಕು
ಗಂಡನ ಪಾದ ದೇವರೆಂದೆರಗಿಕೊ'' ॥

ಅತ್ತೆಮಾವ, ನಾದಿನಿ, ಗಂಡ ಈ ಎಲ್ಲಾ ಸಂಬಂಧಗಳ ಹಿಡಿತದಲ್ಲಿ ಹೆಣ್ಣು ವಿಧೇಯಳಾಗದಿ ಹೇಗೆ ನಡೆದುಕೊಳ್ಳಬೇಕೆಂಬ ಚಾರಿತ್ರಿಕವಾದ ಹಿನ್ನೆಲೆಯನ್ನು ನಮಗೆ ಕಟ್ಟಿಕೊಡುವ ಎಷ್ಟೋ ಸಾಲುಗಳನ್ನು ನಾವು ಕಾಣಲು ಸಾಧ್ಯವಿದೆ.

ಹಾಗೆಯೇ ಪಿತೃನಿಷ್ಠ ಮೌಲ್ಯಗಳಿಗೆ ಉತ್ತರವನ್ನು ನೀಡುವ ಗಟ್ಟಿ ಹೆಣ್ಣುಗಳನ್ನು ಜನಪದರಲ್ಲಿ ಕಾಣಬಹುದು. ಸೂಕ್ಷ್ಮವಾಗಿ ಸಂದರ್ಭಗಳನ್ನು ಎದುರಿಸುವ ನೇರವಾಗಿ ಉತ್ತರಕೊಡುವ ಸಾಲುಗಳು ಜನಪದರಲ್ಲಿ ಸಾಕಷ್ಟಿವೆ. ಕೌಟುಂಬಿಕ ವಿಚಾರ ಎನ್ನುವ ಸಾಮಾಜಿಕ ವಲಯಕ್ಕೆ ನೀಡುವ ಉತ್ತರವು ದಿಟ್ಟವಾಗಿದೆ. ಬೋವಾಳನ್ನು ಓದದೆ ಎಷ್ಟೋ ಜನದ ಹೆಣ್ಣು ಮಕ್ಕಳು ಗಟ್ಟಿತನವನ್ನು ತೋರಿರುವುದಕ್ಕೆ ಸಾಕ್ಷಿಯಾಗುವಂತೆ ಹಲವು ಪದ್ಯಗಳಿವೆ.

''ಅತ್ತಿ ಸಾಯಬೇಕು ಹತ್ತೆಮ್ಮಿ ಕಟ್ಟುವೆ
ಮೈದುನಗೆ ಹಾವು ಕಡಿಯಲಿ ನನಗೆಣೆಯಾ
ಗಂಡಗ ಸಿಡಿಲು ಬಡಿಯಲಿ''

ಈ ರೀತಿಯ ಸಾಲುಗಳು ಸಮಾಜದಲ್ಲಿ ಅಡಗಿರುವ ಪಿತೃಪ್ರಧಾನ ಮೌಲ್ಯಗಳಿಗೆ ನೀಡುವ ಪ್ರತ್ಯುತ್ತರವಾಗಿದೆ. ಹೆಣ್ಣಿಗಿರುವಂಥ ಒತ್ತಡವನ್ನು ಮಿತಿಯನ್ನು ಮೀರಲು ಆಕೆ ಈ ರೀತಿಯ ಸಾಲುಗಳನ್ನು ಸೃಷ್ಠಿಸಿಕೊಂಡಂತೆ ಕಾಣುತ್ತದೆ.

ಬೋವಾ ಚರ್ಚೆ ಮಾಡುವಂತೆ ಹೋರಾಟ ಮಾಡಬೇಕಾದ ಸಂದರ್ಭ ಎದುರಾಗುವುದು ಆ ಕಾಲದ ಒತ್ತಡದ ಫಲ. ಕಾಲದ, ಸಂದಗರ್ಭದ ಒತ್ತಡಗಳು ಮನುಷ್ಯನನ್ನು ಬೇರೆ ಬೇರೆ ರೀತಿಯಾದ ಸಂದಿಗ್ಧತೆಗೆ ಸಿಲುಕಿಸುತ್ತದೆ. ಬಹಳ ಕಠಿಣವಾದಂತಹ ಮೌಲ್ಯಗಳು ಹೆಣ್ಣಿನ ಅಸ್ಥಿತ್ವವನ್ನು ಹುಡುಕಾಟ ಮಾಡುವ ಸಾಲುಗಳು, ಜನಪದ ಸಾಹಿತ್ಯದಲ್ಲಿ ಕಾಣಬಹುದು. ಮೂಲ ತನ್ನತನದ ಬೇರು ಮಾನವೀಯ ಮೌಲ್ಯಗಳು ನಶಿಸಿ ಹೋದ ಒಣ ಸಂದರ್ಭಗಳು ಇವೆ ಎಂಬುದನ್ನು ಕಾಣಬಹುದು.

''ಕಾಲಲಿಪ್ಪ ಮೆಟ್ಟು ಕಾಲಲ್ಲಿದ್ದರೆ ಚೆಂದ
ತಲಿಮ್ಯಾಲದವನು ಹೊರಬೇಡ । ತಮ್ಮಯ್ಯ
ಸಲಗಿ ಮಡದಿಗೆ ಕೊಡಬ್ಯಾಡ ॥

ಹೆಣ್ಣಿಗೆ ಕಡಿವಾಣ ಹಾಕುವ ಆಕೆಯನ್ನು ತನ್ನ ಹಿಡಿತದಲ್ಲಿ ಇಟ್ಟು ಕೊಳ್ಳುವ ಮನೋಭಾವ ಇಂದಿನದಲ್ಲ. ಪುರುಷ ಲೋಕ ನಿರ್ಮಾಣದಲ್ಲಿ ತೊಡಗಿದಾಗ ಹೆಣ್ಣು ಮನೆಗೆಲಸದಲ್ಲಿ ತೊಡಗಬೇಕು. ಆಕೆಯ ಸ್ಥಾನವೇ ಅದು ಎಂದು ಹೇಳುವಾಗ ಎಷ್ಟೋ ಸಾಲುಗಳಿವೆ.

ಮಡದಿಗೆ ಸಲಿಗೆ ಕೊಡಬ್ಯಾಡೆಂದು ಹಿರಿಯಣ್ಣನು ತಮ್ಮಯ್ಯನಿಗೆ ಕಿವಿಮಾತನ್ನು ಹೇಳುವ ಪದ್ಯ ಬೋವಾಳನ್ನು ಓದಿದ ನಂತರ ಈ ರೀತಿಯ ಸಾಲುಗಳು ಮೂಲ ಸಮಸ್ಯೆಯ ಜಾಡು ಎಲ್ಲಿವೆ ಎಂಬುದನ್ನು ಹುಡುಕುವುದರ ಮೂಲಕ ನ್ಯಾಯ ಸಲ್ಲಿಸಲು ಸಾಧ್ಯವಾಗುತ್ತದೆ. ಹೆಚ್ಚಾಗಿ ಪಿತೃಪ್ರಧಾನ ಮೌಲ್ಯಗಳು ಜನಪದರಲ್ಲಿ ಅಡಗಿದ್ದರೂ ಅದಕ್ಕೆ ಪ್ರತ್ಯುತ್ತರವಾಗದಿ ನಿಲ್ಲಬಲ್ಲ ಎಷ್ಟೋ ಮಹಿಳೆಯರು, ಅವರಿಂದ ರಚಿತವಾಗಿರುವಂತ ಉತ್ತರಗಳಂತಿರುವ ಸಾಲುಗಳು ಜನಪದದಲ್ಲಿವೆ.

ಹೆಣ್ಣಿಗಿರುವ ಮೌಲ್ಯಗಳನ್ನು ಕುಸಿಯುವಂತೆ ಮಾಡುವ ಪಿತೃಪ್ರಧಾನ ಸಮಾಜ, ಸಹಜವೆನ್ನುವಂತೆ ಎಷ್ಟೋ ವಿಷಯಗಳ ಮೇಲೆ ಹೇರಿಕೆಯನ್ನು ತಂದೊಡ್ಡಿದೆ. ಹುಟ್ಟಿನಿಂದ ಬಂದಿರುವ ಹಣೆಗಿಡುವ ಕುಂಕುಮ ವೈಧವ್ಯದ ನಂತರ ಕೂಡದು ಎಂಬ ರೀತಿಯನ್ನು ಈ ರೀತಿ ಹೇಳಲಾಗಿದೆ.

''ಚಿಕ್ಕತಿಲಕ ಬಟ್ಟ ಇಕ್ಕದಿರು ಎಲೆ ಹೆಣ್ಣೆ
ಚಿಕ್ಕಪ್ರಾಯದಲ್ಲಿ ನಿನಗಂಡ । ಹೋದ್ಮೇಲೆ
ಚಿಕ್ಕ ಬಟ್ಟಿಟ್ಟು ಫಲವೇನು ? ''

ಹೆಣ್ಣಿನ ಬಾಳು ಬಾಳಿನ ಸಾರ್ಥಕತೆ ಗಂಡನೊಟ್ಟಿಗಿದ್ದಾಗ ಮಾತ್ರ ಸಿಗುವಂಥದಲ್ಲ, ಬಾಳಿಸದ ಗಂಡ ಮಡದಿಯ ಬಿಟ್ಟರೆ ಆಕೆ ಒಂಟಿಯಾಗಿ ಬಾಳಬಲ್ಲಳು ಎಂಬ ಸತ್ಯ। ಈ ಮೇಲಿನ ಸಾಲುಗಳಲ್ಲಿ ಅಡಗಿದೆ. ಪಿತೃಪ್ರಧಾನ ಮೌಲ್ಯಗಳೊಡನೆ ದಿಟ್ಟ ಉತ್ತರ ನೀಡುವ ಹೆಣ್ಣಿನ ಘರ್ಷಣೆ ಎಂದೆಂದಿಗೂ ನಿರಂತರವಾದುದು. ಸ್ತ್ರೀವಾದಕ್ಕೆ ಹೊಸ ಆಯಾಮ ತಂದುಕೊಟ್ಟ ಬೋವಾಳ ಮಾತುಗಳು ಇಲ್ಲಿ ನೆನಪಾಗುತ್ತದೆ.

''ಬಾಳೆ ಕಡಿದರೆ ತೋಟಹಾಳಾಗಬಲ್ಲುದೆ
ಬಾಳಿಸಲಾರದೆ ಮಡದಿಯ ಬಿಟ್ಟರೆ
ಬಾಳಿಸಲಾರಾದೆ ಮಡದಿಯ ಬಿಟ್ಟರೆ
ಬಾಳೆಹಣ್ಣೇನೆ ಕೊಳೆಯಂತೆ''

ತಮ್ಮದೇ ಆದಂತ ಸಂಸ್ಕೃತಿ, ಪರಂಪರೆ ನಮ್ಮ ಸಾಹಿತ್ಯದಲ್ಲಿದೆ. ಸೈದ್ಧಾಂತಿಕ ಮಾದರಿಯಲ್ಲಿ ಅಲ್ಲದಿದ್ದರೂ ಬಹಳ ಗಟ್ಟಿಯಾದ ಮಹಿಳೆಯರು ಜನಪದರಲ್ಲಿ ಕಾಣಲು ಸಿಗುತ್ತಾರೆ. ಮಹಿಳೆಯರ ಬದುಕಿಗೆ ಸಂಬಂಧಪಟ್ಟಂತೆ ಹಿನ್ನೆಲೆ ಈಗಾಗಲೇ ಸೃಷ್ಟಿಯಾಗಿರುವುದನ್ನು ನಾವು ಕಾಣಲುಸಾಧ್ಯವಿದೆ. ಆದರೆ ಹೆಚ್ಚಾಗಿ ಪುರುಷಪ್ರಧಾನ ಮೌಲ್ಯಗಳು, ಪಿತೃಪ್ರಧಾನತೆಯ ಚಿಂತನೆಗಳೇ ಕಾಣಬಹುದು. ಲೋಕನಿರ್ಮಾಣ ಕಾರ್ಯದಲ್ಲಿ ತೊಡಗುವ ಪುರುಷ ಪರಂಪರೆ, ಸಂಸ್ಕೃತ, ಚರಿತ್ರೆಯಲ್ಲಿ ತಾನೇ ಮೇಲುಗೈ ಸಾಧಿಸಿಕೊಂಡು ಬಂದಿರುವುದು ಅಂದಿನಿಂದ ಇಂದಿನವರೆಗೂ ವಿಶ್ವವ್ಯಾಪಕವಾದ ಜಾಗತಿಕ ಸತ್ಯವನ್ನು ಬೋವಾ ವಿವರಿಸಿರುವುದನ್ನು ಇಲ್ಲಿ ನೆನೆಯಬಹುದಾಗಿದೆ.

ಹೆಣ್ಣು ಆಗುವುದಕ್ಕಂತ ಮಣ್ಣು ಆಗುವುದು ಲೇಸು
ಮಣ್ಣಿನ ಮ್ಯಾಲ ಮರವಾಗಿ ಇದ್ದರ
ಬಂದವರಿಗೆಲ್ಲ ನೆರಳವ್ವ''

ಇಂಥ ಜಾನಪದ ಸಾಲುಗಳಲ್ಲಿ ಪರಂಪರಾನುಗತವಾಗಿ ಸ್ತ್ರೀಯರಿಗೆ ಒದಗಿದ ದುಃಸ್ಥಿತಿ ಧ್ವನಿತವಾಗಿದ್ದರೂ ತನ್ನ ನಿರ್ದಿಷ್ಟ ಸಾಂಸಾರಿಕ ಸನ್ನಿವೇಶವನ್ನು ಅನುಭವಿಸಿ ಜಾನಪದ ಸ್ತ್ರೀಯೊಬ್ಬಳು ಹೀಗೆ ಮೊರೆಯಿಟ್ಟಿರಬಹುದೋ ಅಥವಾ ಪರಂಪರೆಯೊಂದು ತನ್ನ ಮೇಲೆ ಹೇರಿದ್ದ ವಾತಾವರಣದ ನಿಂದನೆಯ ಫಲವಾಗಿ ಈ ಸಾಲುಗಳು ಹುಟ್ಟಿಕೊಂಡವೋ ತಿಳಿಯದು.[2] ಅಂದರೆ ಜನಪದರ ಅಭಿವ್ಯಕ್ತಿಯು ತೀರಾ ವೈಯಕ್ತಿಕ ಎನಿಸಿದರೂ ಸಾರ್ವತ್ರಿಕವಾಗಿ ಎಲ್ಲೆಡೆಯೂ ಅನುಭವಕ್ಕೆ ಬರುತ್ತಿರುವ ತಳಮಳಕಾರಿ ಸ್ಥಿತಿ ಎಂದು ಹೇಳಬಹುದು.

ಸ್ತ್ರೀ ಅಸಮಾನತೆ ಎನ್ನುವುದು ಆಯಾ ಕಾಲ, ದೇಶ, ಸಂಸ್ಕೃತಿ ಇವುಗಳೆಲ್ಲವನ್ನು ಪ್ರಭಾವಿಸುತ್ತಾ ತನ್ನದೇ ಆದ ವಿಭಿನ್ನ ಸ್ವರೂಪಗಳನ್ನು ಪಡೆಯುತ್ತಾ ಹೋಗಿದೆ. ಜನರ ಗುಂಪೊಂದು ಒಂದು ಕಡೆ ಬೀಡು ಬಿಟ್ಟು ಜೀವನ ಸಾಗಿಸುತ್ತಿರುವಾಗದ ಆಯಾ ಕಾಲ, ದೇಶದ, ಸನ್ನಿವೇಶದ ಒತ್ತಡಕ್ಕೆ ಸಿಲುಕುವ ಸಂದರ್ಭವು ಹೊಸ ರೀತಿಯ ಅನುಭವವನ್ನು ಅರಗಿಸಿಕೊಳ್ಳುತ್ತಾ ಮುಂದೆ ಸಾಗುತ್ತದೆ. ಹೀಗೆ ಒಂದು ಆಲೋಚನೆಯ ಮಾದರಿಯನ್ನು ಕಟ್ಟಿಕೊಟ್ಟ ಕೃತಿಯಾಗಿ ಸಿಮೊನ್ ದ ಬೋವಾಳ ದಿ ಸೆಕೆಂಡ್ ಸೆಕ್ಸ್ ಕೃತಿಯನ್ನು ನಾವು ಗಮನಿಸಬಹುದು.

**ವಚನಕಾಲ ಘಟ್ಟ ಮತ್ತು ಹೆಣ್ಣು**

ಸಾಮಾಜಿಕವಾಗಿ ಬದಲಾವಣೆಯನ್ನು ತಂದ ಘಟ್ಟ ವಚನಕಾಲಘಟ್ಟ. ಕನ್ನಡದ ಸಂದರ್ಭದಲ್ಲಿ ಸ್ತ್ರೀ ಸಂವೇದನೆ ಎಂಬುದು ಆರಂಭವಾದದ್ದು, ಅಧಿಕೃತತೆ ದೊರೆತದ್ದು, ವಚನ ಸಾಹಿತ್ಯ ಸಂದರ್ಭದಲ್ಲಿ ಎಂಬುದು ತಿಳಿದಿರುವ ಸಂಗತಿ. ಆದರೆ ಸ್ತ್ರೀವಾದ ಎಂಬುದು ಆರಂಭವಾದದ್ದು ಹನ್ನೆರಡನೆಯ ಶತಮಾನದಲ್ಲಿ ಎಂದು ನಿಗಧಿಯಾಗಿ ಹೇಳುವಂತೇನು ಇಲ್ಲ. ''ಸ್ತ್ರೀಯರು ಸಹ ಸಮಾಜದ ಒಂದು ಭಾಗ ಎಂಬ ಮುಖ್ಯ ಅಂಶವು ಪ್ರಜ್ಞೆಯಲ್ಲಿ ಮೂಡಿ ಬಂದಂತಹ ಘಟ್ಟ'' ಎಂದೇ ಕರೆಯಬಹುದು. ಅಲೌಕಿಕ ಜೀವನದ ಉತ್ಕಟ

ಪ್ರೀತಿಯು ಏಕದೇವೋಪಾಸನೆ, ಬದುಕನ್ನು ಸಾರ್ಥಕತೆಯ ಕಡೆಗೆ ಕೊಂಡೊಯ್ಯುವ ಸಂದರ್ಭವನ್ನು ಈ ಘಟ್ಟದಲ್ಲಿ ಕಾಣಲು ಸಾಧ್ಯವಿದೆ.

ಸ್ತ್ರೀ ವಿಮೋಚನೆ ಎನ್ನುವ ಅಂಶವು ಜಗತ್ತಿನ ಅಗತ್ಯ ಹಾಗೂ ಚಾರಿತ್ರಿಕ ಅನಿವಾರ್ಯತೆಗಳಲ್ಲಿ ಒಂದು. ಅನೇಕ ಶತಮಾನಗಳಿಂದ ವ್ಯವಸ್ಥಿತವಾಗಿ ಎಲ್ಲಾ ಬಗೆಯಿಂದಲೂ ಬಂಧನಕ್ಕೊಳಪಟ್ಟವಳು ಮಹಿಳೆ, ಇದು ಸಾರ್ವತ್ರಿಕತ ಸಂಗತಿ. ಮನುಷ್ಯನ ಇತಿಹಾಸದಲ್ಲಿ ಮೊದಲು ಆಕೆ ದಾಸ್ಯಕ್ಕೆ ಹೇಗೆ ಒಳಗಾದವಳೆಂಬುದಕ್ಕೆ ಅನೇಕ ರೀತಿಯ ಉತ್ತರಗಳು ಸಾಧ್ಯ. ಆದರೆ ಒಂದು ಕ್ಷಣದಲ್ಲಿ ಒಂದು ದಿನದಲ್ಲಿ ಇತಿಹಾಸ ಪಡೆದ ತಿರುವು ಇದಲ್ಲ. ಕ್ರಮೇಣ ಈ ದಾಸ್ಯದ ಅಸಮಾನತೆಯ ಪರಂಪರೆ ಬೆಳೆಯಿತು. ಮಹಿಳೆ ಸಾಮಾಜಿಕ ಉತ್ಪಾದನಾ ಕ್ಷೇತ್ರದಿಂದ, ಸಾಮಾಜಿಕ, ರಾಜಕೀಯ , ಸಾಂಸ್ಕೃತಿಕ, ವಲಯಗಳ ಮುಖ್ಯ ಪ್ರವಾಹದಿಂದ ಹೊರಗೆ ದಬ್ಬಲ್ಪಟ್ಟಳು. ಕುಟುಂಬಕ್ಕೆ ಅವಳನ್ನು ಕಟ್ಟಿಹಾಕಲಾಯಿತು. ಮಾತೃತ್ವ, ಪತ್ನಿತ್ವ, ಸ್ತ್ರೀತ್ವದ ಆದರ್ಶಗಳು ಕ್ರಮೇಣ ಅವಳ ಮೇಲೆ ಹೇರಲ್ಪಟ್ಟವು. ಆ ಆದರ್ಶಗಳು ಇವಳನ್ನು ಆಳಲು ಅನುಕೂಲವಾಗುವಂತೆ ರೂಪಿತವಾದದ್ದೇ ವಿನಾ ಅವಳ ಹಿತಲಕ್ಷ್ಯದಲ್ಲಿಟ್ಟುಕೊಂಡು ರೂಪಿತವಾದುದಲ್ಲ. ಆ ಜಾಗತಿಕ ಇತಿಹಾಸದಿಂದ ಭಾರತದ ಕರ್ನಾಟಕದ ಸ್ತ್ರೀ ಹೊರತಲ್ಲ.[2]



ವೀರಶೈವ ಧರ್ಮವನ್ನು ಅವಲಂಬಿಸಿ ಹನ್ನೆರಡನೆ ಶತಮಾನದಲ್ಲಿ ಆದ ಸಾಮಾಜಿಕ ಕ್ರಾಂತಿ ಸ್ತ್ರೀ ಸ್ವಾತಂತ್ರ್ಯ ಆದರ್ಶ ಭಾವನೆಯನ್ನು ಮೂಡಿಸಿತು. ಸ್ತ್ರೀಯರಲ್ಲಿ ಸಮಾನತೆಗಾಗಿ ಹೋರಾಟವನ್ನು ಮಾಡುವಂತೆ ಆಯಿತು. 'ಸಂಪ್ರದಾಯಗಳ ಸಂಕಲೆಯಿಂದ ಭಾರತದ ನಾರಿಯರನ್ನು ಬಸವಣ್ಣಾದಿಗಳು ವಿಮುಕ್ತಿಗೊಳಿಸಿ ಸ್ತ್ರೀ ಸಮಾನತೆಯನ್ನು ತಂದರು. ಎಂಬಂಥ ಪ್ರಚಲಿತ ಧೋರಣೆಯಿದೆ. ''ನಮ್ಮ ವಚನಕಾರರ ಸ್ತ್ರೀ ಸ್ವಾತಂತ್ರ್ಯವು ಜಗತ್ತಿಗೇನೇ ಬುದ್ಧಿ ಕಲಿಸುವಂತಹುದಾಗಿದೆ. ಮತ್ತು ಅವರ ಈ ಧೋರಣೆಯಿಂದ ಸಧ್ಯದ ಜಗತ್ತಿನಲ್ಲಿ ಸ್ತ್ರೀ ಸ್ವಾತಂತ್ರ್ಯದ ವಿಷಯಕ್ಕೆ ಇದ್ದ ವಾದವು ಬಗೆಹರಿಯಬಹುದು ಎಂದು ತೋರುತ್ತದೆ.[3]

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಎತ್ತುವ ಮೂಲಭೂತ ಪ್ರಶ್ನೆಯನ್ನು ನಾವು ಹಲವಾರು ವಚನಗಳಲ್ಲಿ ಕಾಣಬಹುದು. ಸ್ತ್ರೀಯರಿಗೆ ತಮ್ಮ ಮೂಲಭೂತ ಅಂಶಗಳನ್ನು ತಮ್ಮ ವಚನದ ಮೂಲಕ ಹೊಂದುವ ದೇವರು, ಆಧ್ಯಾತ್ಮ, ಮುಕ್ತಿ ಇವೆಲ್ಲವು ಹೆಣ್ಣಿಗೆ

ಕೈಗೆಟಕುವುದಲ್ಲ ಎನ್ನುವ ಹೊತ್ತಿಗೆ ಸಮಾನತೆಗಾಗಿ ಹೋರಾಟ ಮಾಡಿದ ಎಷ್ಟೋ ಜನ ಮಹಿಳೆಯರು ವಚನಕಾರ್ತಿಯರಾಗಿ ತಮ್ಮನ್ನು ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಂತಹ ಉದಾಹರಣೆ ಸಾಕಷ್ಟಿದೆ.

ಬೋವಾ ತಿಳಿಸುವಂತೆ ಸಂಘಟನೆಯ ಶಕ್ತಿ ಬಹಳ ಮುಖ್ಯ ಮಹಿಳೆಯರು ಸಂಘಟನೆಯಾಗಬೇಕು ಎನ್ನುತ್ತಾಳೆ. ವಚನಕಾಲಘಟ್ಟ ಬೋವಾಳಿಗಿಂತ ಎಷ್ಟೋ ಶತಮಾನಗಳ ಹಿಂದಿನ ಕರ್ನಾಟಕದ ಇತಿಹಾಸವಾದರೂ ಬೋವಾಳ ಸಂಘಟನೆಯ ಆಶಯ ಹನ್ನೆರಡನೆಯ ಶತಮಾನದಲ್ಲೇ ಈಡೇರಿತ್ತೆಂದು ತಿಳಿಯಬಹುದು. ಆ ರೀತಿ ಸಂಘಟಿಸಿದ್ದೇ ಸಾಮಾಜಿಕ ಕ್ರಾಂತಿಯಾಯಿತು ಎಂದು ತಿಳಿಯಲು ಸಾಧ್ಯವಿದೆ.

'' ಗಂಡು ಮೋಹಿಸಿ ಹೆಣ್ಣು ಹಿಡಿದಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾವುದೆಂದರಿಯಬೇಕು
ಈ ಎರಡರ ಉಭಯವ ಕಳೆದು ಸುಖಿತಾನಾಗಬಲ್ಲಡೆ
ನಾಸ್ತಿನಾಥನ ಪರಿಪೂರ್ಣನೆಂಬೆ

ಗೊಗ್ಗವ್ವೆಯ ಈ ವಚನ ಬೋವಾಳ ತಾತ್ವಿಕ ಚರ್ಚೆಗೆ ಬಹಳಷ್ಟು ಸಮೀಪವಾದ್ದು ಎಂಬ ಅಂಶವನ್ನು ಇಲ್ಲಿ ಗ್ರಹಿಸಲು ಸಾಧ್ಯವಿದೆ.

ಗಂಡಿಗಿರುವ ಸ್ವಾತಂತ್ರ್ಯ ಹೆಣ್ಣಿಗೆ ಚೌಕಟ್ಟನ್ನು ಹಾಕಿ ಬಿಡುವುದು ಎಂಬುದಕ್ಕೆ ಪ್ರತ್ಯುತ್ತರವಾಗಿದೆ.

ಲಿಂಗಾಧಾರಿತ ಶ್ರೇಣೀಕೃತ ವ್ಯವಸ್ಥೆಯನ್ನು ಒಡೆಯುವ ವಿಚಾರ ಬೋವಾ ಮಂಡಿಸಿದ ಸೈದ್ಧಾಂತಿಕ ಮಾದರಿಯನ್ನು ಸತ್ಯಕ್ಕನ ವಚನದಲ್ಲಿ ಕಾಣಬಹುದು.

''ಮೊಲೆ ಮುಡಿ ಇದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ
ಕಾಸೆ ಮೀಸೆ ಕಠಾರಿ ಇದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ
ಅದು ಜಗದ ಹೋಹು, ಬಲ್ಲವರ ನೀತಿಯಲ್ಲ

ಏತರ ಹಣ್ಣಾದರೂ ಮಧುರವೇ ಕಾರಣ
ಇದರಿಂದ ನೀನೇ ಬಲ್ಲೆ ಶಂಭುಜಕ್ಕೇಶ್ವರಾ''

ಎಲ್ಲಾ ಲಿಂಗಾಧಾರಿತ ಪದ್ಧತಿಗಳನ್ನು ಮೀರಿ ಮಾನವೀಯ ಮೌಲ್ಯವನ್ನು ಚಂದಿಮರಸನ ಸಾಲುಗಳಲ್ಲಿ ಈ ರೀತಿ ಕಾಣಬಹುದು.

''ಸ್ತ್ರೀಯಲ್ಲಿ ಪುರುಷನಲ್ಲಿ, ನಪುಂಸಕನಲ್ಲಿ
ಆತ್ಮನೆಂದರಿಯಬಹುದಲ್ಲದೆ ಕಾಣಿಸಬಾರದು''

ಎಲ್ಲಾ ಮೌಲ್ಯಗಳನ್ನು ಮೀರಿದ ಮನುಷ್ಯತ್ವವನ್ನು ಸಾರುವಂತಹ ವಚನಗಳು ಸಾಕಷ್ಟಿವೆ. ಬೋವಾಳ ಚರ್ಚೆಯನಂತರ ನಾವು ಯೋಚಿಸಿದರೆ ನಮಗೆ ಕಡೆಯಲ್ಲಿ ಉಳಿವುದು, ಮಾನವೀಯತೆ, ನಾವು ಮನುಷ್ಯರೆಂಬ ಗಟ್ಟಿಯಾದ ಅಂಶಗಳು, ಬೋವಾಳ ಪ್ರಭಾವ ವಚನಕಾರ್ತಿಯ ಮೇಲೆ ಆಗಿರದಿಲ್ಲದಿದ್ದರೂ ವಚನಕಾರ್ತಿಯರು ಬಯಸಿದ್ದು ಬೋವಾ ಬಯಸಿದ್ದು ಅಷ್ಟೇ ಯಾಕೆ ಇಡೀ ಸ್ತ್ರೀವಾದದ ಚಿಂತನೆ ಬಯಸುವುದು ಈ ಮೆಲೆ ತಿಳಿಸಿದ ಆಶಯಗಳನ್ನೇ ಎನ್ನುವ ಸತ್ಯ ಬಹಳ ಮುಖ್ಯವಾದುದು.

''ಅಯ್ಯಾ ನೀ ಕೇಳಿದರೆ ಕೇಳು ಕೇಳದಿದ್ದರೆ ಮಾಣು
ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯ ನೀನೊಲಿದರೆ ಒಲಿ, ಒಲಿಯದಿದ್ದರೆ ಮಾಣು
ನಾ ನಿನ್ನ ಪೂಜಿಸಿಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿದ್ದರೆ ಮಾಣು
ನಾನಿನ್ನ ನೋಡಿ, ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ
ಚನ್ನಮಲ್ಲಿಕಾರ್ಜುನಯ್ಯ ನಾ ನಿಮ್ಮ ಪೂಜಿಸಿ
ಹರುಷದೊಲಾಲಾಡುವನಯ್ಯ''

ಸ್ಫುಟವಾಗಿ ಕೇಳುವ ಎಷ್ಟೋ ಧನಿಗಳು ವಚನ ಸಾಹಿತ್ಯದಲ್ಲಿರುವುದನ್ನು ಕಾಣಬಹುದಾಗಿದೆ. ಅಲೌಕಿಕ ಪತಿಯನ್ನು ಧ್ಯಾನ ಮಾಡುವ ಅಕ್ಕ ಲೌಕಿಕ ಪತಿಯನ್ನು ತೊರೆದು ಚನ್ನಮಲ್ಲಿಕಾರ್ಜುನ ನ್ನೇ ಆರಾಧಿಸುತ್ತಾ ಸಾರ್ಥಕ್ಯ ಜೀವನ ಪೂರ್ತಿಗೊಳಿಸಿದ ಉದಾಹರಣೆ ಕನ್ನಡದಲ್ಲಿ ವಚನಕಾಲಘಟ್ಟದಲ್ಲಿ ಮೂಡಿ ಬಂದಿದೆ. ''ಶರಣ ಸತಿ ಲಿಂಗ

ಪತಿ' ಯ ಭಾವವು ಬಯಸುವುದು ಮನುಷ್ಯನ ಸಮಾನತೆಯನ್ನಲ್ಲದೆ ಬೇರೇನನ್ನೂ ಅಲ್ಲ. ಮಾನವೀಯ ಮೌಲ್ಯಗಳನ್ನು ಸಾರುವ ಕಾರ್ಯ ವಚನಕಾರ್ತಿಯರಿಂದ ಆಗಿದೆ ಎಂದು ಹೇಳಬಹುದು. ಕೆಲವರಿಗೆ ಸೀಮಿತವಾಗಿದ್ದ ಅಭಿವ್ಯಕ್ತಿ ಸ್ವಾತಂತ್ರ್ಯ ಸಾರ್ವತ್ರಿಕವಾಯಿತು. ಬೋವಾ ಬಯಸುವ ಸಂಘಟನೆಯ ಶಕ್ತಿ ವಚನಕಾಲಘಟ್ಟದಲ್ಲಿ ಕನ್ನಡದ ಸಂದರ್ಭದಲ್ಲಿ ಸಾಧ್ಯವಾಯಿತು.

ಅಕ್ಕಮಹಾದೇವಿ ''ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗಾನೊಲಿದೆನವ್ವಾ'' ಎನ್ನುತ್ತಾ ನಿರಾಕಾರ ಪತಿಯನ್ನು ನೆನೆಯುತ್ತಾ ಲೋಕದಾ ಎಲ್ಲಾ ಅಸಹನೀಯ ಅಂಶಗಳನ್ನು ಮೀರುವ ಪ್ರಯತ್ನ ಮಾಡುತ್ತಾಳೆ. ಹಾಗೆಯೇ ಎಲ್ಲಾ ಚಿಂತನೆಗಳಿಗೆ ಉತ್ತರವಾಗಿ ನಿಲ್ಲುವವಳು ಕೇವಲ ಅಕ್ಕಮಹಾದೇವಿಯಲ್ಲ. ಇಡೀ ವಚನರಚನೆಗೆ ತೊಡಗಿದ ವಚನಕಾರ್ತಿಯರ ಆಶಯವೆಲ್ಲವೂ ಒಂದಾಗುತ್ತದೆ. ನೀಲಾಂಬಿಕೆಯ ಒಂದು ವಚನವು ಯಾವ ಹಂಗಿಲ್ಲದೆ ಬದುಕಬೇಕೆಂಬ ಜೀವನದ ಚಿತ್ರಣವನ್ನು ಕಟ್ಟಿಕೊಡುತ್ತದೆ.

''ಆನೆತ್ತಲೀ ಸಂಸಾರವೆತ್ತ । ಆನತ್ತಲೀ ಕಾಯವೆತ್ತ
ಆತ್ತಲಿ ನಿಜ ಮಹತ್ವವೆತ್ತ
ಸಂಗಯ್ಯನೆತ್ತ, ಬಸವನೆತ್ತ, ಆನೆತ್ತ ।

- ನೀಲಾಂಬಿಕೆ

ಅಲೌಕಿಕ ಜೀವನದೆಡೆಗೆ ಒಲವು ತೋರಿದರೂ ಸಂಸಾರ, ಕಾಯ, ಇವುಗಳೆಲ್ಲ ಕ್ಷಣಿಕವೆಂಬ ಜ್ಞಾನಪಡೆದವರು ವಚನಕಾರ್ತಿಯರು. ಸಂಗಯ್ಯನೆತ್ತ, ಬಸವನೆತ್ತ ಎನ್ನುವ ನೀಲಾಂಬಿಕೆ ಆಕೆ ಒಂಟಿಯಾಗಿ ಜೀವಿಸಬಲ್ಲಳು. ಎಲ್ಲವನ್ನು ಎದುರಿಸಬಲ್ಲ ಗಟ್ಟಿ ಹೆಣ್ಣಿನಂತೆ ಕಂಡು ಬಂದಿರುವುದನ್ನು ಕಾಣಬಹುದಾಗಿದೆ.

ಬಸವಣ್ಣನವರು ಆತ್ಮಸಂಬಂಧ ಬಹಳ ಮುಖ್ಯವಾದುದೆಂದು ಸಾರಿದರು. ನೀಲಲೋಚನೆಯ ಜೊತೆಗಿನ ದಾಂಪತ್ಯವು ಒಂದೆಡೆ ಬೋವಾ ತಿಳಿಸುವ ಹೆಣ್ಣಿನ ಜೈವಿಕ ಭಿನ್ನತೆ, ಲೈಂಗಿಕತೆ ಎನ್ನುವ ಅಂಶವನ್ನು ನೆನಪು ಮಾಡುತ್ತದೆ. ದಾಂಪತ್ಯದಲ್ಲಿ ಸಾಧಿಸಿದ ಮಾನವೀಯ ಅಂಶಗಳು ಬಹಳ ಮುಖ್ಯವಾಗುತ್ತದೆ.

''ಮಡದಿ ಎನ್ನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವನ ಎನಗೆ
ಉಭಯದ ಕೊಳವ ಹರಿದು ಬಸವಂಗೆ ಶಿಶುವಾದೆನು
ಬಸವನೆನ್ನ ಶಿಶುವಾದನ
ಪ್ರಮಥರು ಪುರಾತರು ಸಾಕ್ಷಿಯಾಗಿ''

ಸಂಗಯ್ಯನಿಕ್ಕಿದ ದಿಬ್ಬದ ಮೀರದೆ ಬಸವನೊಳಗಾನನಡಗಿದೆ ವಚನಕಾರ್ತಿಯರು ಬಹಳ ಗಟ್ಟಿಗರು ಎನ್ನುವುದಕ್ಕೆ ಸಾಕಷ್ಟು ವಚನಗಳು ಸಾಕ್ಷಿಯಾಗಿವೆ. ಅಕ್ಕಮಹಾದೇವಿ ತನ್ನ ಒಂದು ವಚನದಲ್ಲಿ ಹೆಣ್ಣಿಗೆ ಎಂದೆಂದು ಆತ್ಮಸ್ಥೈರ್ಯ ತುಂಬುವಂತೆ ಇದೆ.

''ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡೆಯಾ ?
ಏನಮಾಡಿದಡೂ ಅನುಜುವಳಲ್ಲ
ತರಗೆಲೆಯ ಮೇಲಿಡು ಆನಿಹೆನು
ಸರಿಯ ಮೇಲೊರಗಿ ಆನಿಹೆನು
ಚೆನ್ನಮಲ್ಲಿಕಾರ್ಜುನಯ್ಯಾ, ಕರಕೇಡನೊಡ್ಡಿದೆಡೆ
ಒಡಲನು ಪ್ರಾಣವನು ನಿಮಗರ್ಪಿಸಿ ಶುದ್ಧಳಹೆನು''

ಸ್ತ್ರೀ ಅಬಲೆ, ಕೋಮಲೆ ಈ ರೀತಿಯ ಮಾತುಗಳಿಗೆ ಉತ್ತರ ನೀಡುವ ವಚನದಂತೆ ಮೇಲಿರುವುದನ್ನು ವಚನ ಕಾಣಬರುತ್ತದೆ.

''ನಾಮದಲ್ಲಿ ಹಿಂಗೂಸೆಂಬ ಹೆಸರಾದಡೇನು ಭಾವಿಸಲು ಗಂಡುರೂಪಿ'' - ಅಕ್ಕಮಹಾದೇವಿ

ದೈಹಿಕವಾಗಿ ಹೆಣ್ಣು ಗಂಡು ಬೇರ ಎಎಂಬುದಗ ಸತ್ಯ ಆದರೂ ಮನೋಸ್ಥೈರ್ಯ ಬಹಳ ಗಟ್ಟಿಯಾದುದು. ನಾಮದಲ್ಲಿ ಹೆಂಗಸಾದರೆ ಗಂಡುರೂಪ ಭಾವಿಸಿಕೊಂಡು ಇರಬಹುದು. ಆಕಾರಕ್ಕೂ ಮಾನಸಿಕ ಸ್ಥಿತಿಗೂ ಇರುವ ಬೇರೆ ಬೇರೆ ನೆಲೆಗಳನ್ನು ಗ್ರಹಿಸಲು ಈ ಮೂಲಕ ಸಾಧ್ಯವಾಗಿದೆ.

ವೀರಶೈವ ಭಕ್ತಿ ಚಳುವಳಿಯ ಉದ್ದೇಶ ಲಿಂಗದಲ್ಲಿ ಐಕ್ಯವಾಗುವುದು ಎಂದಾದರೂ ಮನುಶುದ್ಧಿ ಭಾವ, ಅರಿವು, ಜ್ಞಾನ, ಕ್ರಿಯೆ ಎಲ್ಲವನ್ನು ಪ್ರಸ್ತಾಪಿಸಿತು. ಮಾನವೀಯ ಮೌಲ್ಯಗಳು ಸಮಾನತೆ ಕೂಡಿ ಬಾಳುವ ವಿಧಾನ ತಿಳಿಸಿಕೊಟ್ಟಿತು. ಬೋವಾಳ ಎಲ್ಲಾ ಚಿಂತನೆಯಾಚೆಗೆ ಸೈದ್ಧಾಂತಿಕ ಮಂಡಣೆ ಎನಿಸಿದರೂ ಸಹ ಎಲ್ಲಾ ಮಾನವರ ಹುಡುಕಾಟಕ್ಕೆ ಮೇಲೆ ತಿಳಿಸಿದ ಎಲ್ಲಾ ಅಂಶಗಳು ಸಹ ಇದೆ. ಅಗತ್ಯತೆ ಎಂಬುದು ಗಮನಾರ್ಹ ಅಂಶ. ಉದಾಹರಣೆಗೆ ಈ ವಚನವನ್ನು ಗಮನಿಸಬಹುದು.

ಅಂಗದೊಳಗೆ ಅಂಗವಾಗಿ, ಅಂಗವಲಿಂಗೈಕ್ಯವ ಮಾಡಿದೆ
ಮನದೊಳಗೆ ಮನವಾಗಿ, ಮನವ ಲಿಂಗೈಕ್ಯವ ಮಾಡಿದೆ,
ಭಾವದೊಳಗೆ ಭಾವವಾಗಿ, ಭಾವವ ಲಿಂಗೈಕ್ಯವ ಮಾಡಿದೆಮ
ಅರಿವಿನೊಳಗೆ ಅರಿವಾಗಿ, ಅರಿವ ಲಿಂಗೈಕ್ಯವ ಮಾಡಿದೆ
ಜ್ಞಾನದೊಳಗೆ ಜ್ಞಾನವಾಗಿ, ಜ್ಞಾನವ ಲಿಂಗೈಕ್ಯವ ಮಾಡಿದೆ
ಕ್ರಿಯೆಗಳೆಲ್ಲವ ನಿಲಿಸಿ ಕ್ರಿಯಾತೀತವಾಗಿ
ನಿಃಪತಿ ಲಿಂಗೈಕ್ಯವ ಮಾಡಿದೆ
ಚೆನ್ನಮಲ್ಲಿಕಾರ್ಜುನಯ್ಯನೊಳಗೆ ನಾನಳಿದೆನಾಗಿ
ಲಿಂಗವೆಂಬ ಘನವು ಎನ್ನಲ್ಲಿ
ಅಳಿಯಿತ್ತು ಕಾಣಾ ಸಂಗನಬಸವಣ್ಣಾ

'ಆತ್ಮಕ್ಕೆ ಲಿಂಗಬೇಧವಿಲ್ಲ'' ಸ್ತ್ರೀ ಸಮಾನತೆ, ಮಾನವೀಯತೆ ಬಹಳ ಮುಖ್ಯವೆಂಬ ಅಶವನನು ವಚನಕಾರ್ತಿಯರು ಸಾರಿರುವುದು ಅವರ ವಚನಗಳ ಮೂಲಕವು ಗ್ರಹಿಸಲು ಸಾಧ್ಯವಾಗಿದೆ. ಆಕಾಲಕ್ಕೆ ಚಾರಿತ್ರಿಕ ಹಿನ್ನೆಲೆಗೆ ಒರಗಿಸಿ ನೋಡುವುದಕ್ಕಿಂತ ಆಶಯ ಎನ್ನುವುದು, ಅಭಿವ್ಯಕ್ತಿಸಿದ ರೀತಿ ಬಹಳ ಮುಖ್ಯವಾಗುತ್ತದೆ ಎಂಬುದನ್ನು ಮರೆವಂತಿಲ್ಲ.

ಡಾ. ಎಚ್.ಎಸ್. ಶ್ರೀಮತಿ ಅವರು ಹೆಣ್ಣು ಕನ್ನಡ ಸಾಹಿತ್ಯದ ಗ್ರಹಿಕೆ ಎಂಬ ಲೇಖನದಲ್ಲಿ ವಚನಕಾಲಘಟ್ಟದ ಬಗ್ಗೆ ಹೀಗೆ ಹೇಳುತ್ತಾರೆ. ''ಸಾಮಾನ್ಯವಾಗಿ ಕನ್ನಡ ವಿಮರ್ಶೆಯು ವಚನರಚನೆಯ ಕಾಲವನ್ನು ಸ್ತ್ರೀ ಸ್ವಾತಂತ್ರ್ಯದ ಸಮಾನತೆಯ ಕಾಲವೆಂದು ಉತ್ಸಾಹಿಸಿ ಮಾತನಾಡುವುದನ್ನು ನೋಡುತ್ತೇವೆ. ವಚನಕಾರರ ಸ್ತ್ರೀ ಸಂಬಂಧಿ ಚಿಂತನೆಗಳನ್ನು ಉಲ್ಲೇಖಿಸಿ ಈ ವಾದವನ್ನು ಸಮರ್ಥಿಸುವುದು ಒಂದು ಬಗೆ, ಹಾಗೆಯೇ

ವಚನಕಾರ್ತಿಯರನ್ನೂ ಅವರ ವಚನಗಳನ್ನೂ ಉಲ್ಲೇಖಿಸಿ ವಾದವನ್ನು ಸಮರ್ಥಿಸುವುದು ಇನ್ನೊಂದು ಬಗೆ ಎನ್ನುತ್ತಾರೆ.

ಗೆಂಡು ಹೆಣ್ಣು ಎಂಬ ವಿಭಿನ್ನತೆಯನ್ನು ಮೀರಿ ಬೆಳೆಯುವ ಸಾಲುಗಳು ಇದ್ದರೂ ''ಸತಿ ಪತಿಗಳೊಂದಾದ ಭಕ್ತಿ' ಎನ್ನುವುದು ದಾಂಪತ್ಯದ ಸಾರ್ಥಕ್ಯವನ್ನು ಮೀರಿ ನಿಲ್ಲುವ ಭಕ್ತಿ ಸಾಧಿಸಲು ಸ್ತ್ರೀಪುರುಷರಲ್ಲಿ ಒಂದಾದ ಭಕ್ತಿ ಎಂಬ ಸಾಲುಗಳು ಗಂಡು/ ಹೆಣ್ಣು ಎಂಬ ಎರಡು ಲಿಂಗಗಳು ಬೇರೆಯಾದರೂ ಸಾಧಿಸುವ ಭಕ್ತಿ ಒಂದೇ ಎಂಬ ಮಾತನ್ನು ನೆನೆಯಬಹುದು.

ಎಷ್ಟೇ ಭಿನ್ನಾಭಿಪ್ರಾಯವಿದ್ದರೂ ವಿಜಯಾದಬ್ಬೆ ಅವರು ತಮ್ಮ ವಚನಕಾರ್ತಿಯರು ''ಒಂದು ವಿಮುಕ್ತಿಪರಚಿಂತನೆ'' ಲೇಖನದಲ್ಲಿ ಹೀಗೆ ಹೇಳುತ್ತಾರೆ. ''ವೀರಶೈವ ಆಂದೋಲನ ಪ್ರತಿಪಾದಿಸಿದ ಸ್ತ್ರೀಸ್ವಾತಂತ್ರ್ಯದ ಸ್ವರೂಪವನ್ನು ಕುರಿತು ಬಿನ್ನಾಭಿಪ್ರಾಯಗಳಿವೆ. ಈ ಆಂದೋಲನ ಪ್ರತಿಪಾದಿಸಿದ ಸ್ವಾತಂತ್ರ್ಯ, ಆದರ್ಶ ಸ್ತ್ರೀಸ್ವಾತಂತ್ರ್ಯ ಎಂಬ ಭಾವನೆಯನ್ನು ಮೂಡಿಸುವಂತ ಅಭಿಪ್ರಾಯಗಳು ಬಂದಿವೆ.'' ಹೌದು ವಚನಕಾಲಘಟ್ಟದಲ್ಲಿ ವಚನಕಾರ್ತಿಯರ ಪ್ರಯತ್ನ ಬಹಳ ಮುಖ್ಯವಾಗುತ್ತದೆ. 'ಮೂಕನಿಗೆ ಬಾಯಿ ಬಂದಾಗ'' ಎಂಬಂತೆ ಮೌನವಾಗಿಯೇ ನಲುಗುತ್ತಿದ್ದ ಎಷ್ಟೋ ಮಹಿಳೆಯರ ಬಿಡುಗಡೆಗೆ ಸ್ವಾತಂತ್ರ್ಯಕ್ಕೆ, ದಾರಿ ತೆರೆಯಿತೆಂದರೆ ತಪ್ಪಾಗಲಾರದು. ವಚನಕಾಲಘಟ್ಟ ಕೇವಲ ಮಹಿಳೆಯರಿಗೆ ಸ್ವಾತಂತ್ರ್ಯದ ಹಾದಿ ತೆರದಂತೆ ಅಲ್ಲ. ಅದೊಂದು ಚಾರಿತ್ರಿಕವಾಗಿ ಎಲ್ಲಾ ರೀತಿಯಲ್ಲೂ ಪ್ರಮುಖವಾಗುವ ಘಟ್ಟ ಎಂದೇ ಹೇಳಬಹುದು. ಭಾಷೆ, ಸಂಸ್ಕೃತಿ, ಧರ್ಮ, ಜನಾಂಗ, ಸ್ತ್ರೀ ಎಲ್ಲರೂ ವಿಮೋಚನೆ ಪಡೆದ ಘಟ್ಟವೆಂದೇ ಗುರುತಿಸಬಹುದು.

ವಚನಸಾಹಿತ್ಯ ಚಳುವಳಿಯ ಬಗ್ಗೆ ಬೇರೆ ಬೇರೆ ರೀತಿಯ ಮಾತುಗಳು ಕಂಡು ಬಂದರೂ ಸಹ ಅವರ ವಚನ ರಚನೆ ದಿಟ್ಟ ನಿರ್ಧಾರಗಳು ಬಹಳ ಮುಖ್ಯ ಸಂತಾನೋತ್ಪಾದನೆ. ಹೆಣ್ಣಿನ ದೇಹ ಅವಳ ಸಾಧನೆಗೆ ತಡೆಯಬೇಕಾಗಿಲ್ಲ ಎಂದು ಹೇಳುವ ವಚನವನ್ನು ನೋಡಬಹುದು.

ಹೆಣ್ಣಿನ ಹೆಣ್ತನ ಅಥವಾ ಹೆಣ್ಣು ಶರೀರ ಅವಳ ಸಾಧನೆಗೆ ತಡೆಯಾಗದಬೇಕಿಲ್ಲ. ಅದನ್ನು ಅಕ್ಕನಂಥ ಶರಣೆಯರು ಆಗಿಸಿ ತೋರಿಸಿದರು. ಒಂದೆಡೆ ಅಕ್ಕನ ವಚನ ಅದನ್ನು

ಸ್ಪಷ್ಟವಾದ ಶಬ್ಧಗಳಲ್ಲಿ ಹೀಗೆ ಹೇಳಿದೆ.

"ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ
ಗಂಡು ಗಂಡಾದೆಡೆ ಹೆಣ್ಣಿನ ಸೂತಕ
ಮನದ ಸೂತಕ ಹಿಂಗಿದೆಡೆ
ತನುವಿನ ಸೂತಕಕ್ಕೆ ತೆರಹುಂಟೆ ಅಯ್ಯಾ ?"

ಹೆಣ್ಣು ಎಂಬ ಮಿತಿಯನ್ನು ಮೀರುವಲ್ಲಿ ಅಕ್ಕಮಹಾದೇವಿ ತನ್ನ ವಚನದಲ್ಲಿ ಹೀಗೆ ಹೇಳಿಕೊಂಡಿರುವ ರೀತಿ ಹೆಂಗಸೂ ಅಲ್ಲ ಗಂಡಸೂ ಅಲ್ಲ ಸ್ಥಿತಿಯನ್ನು ನೆನೆಯುತ್ತಾಳೆ. ತನ್ನ ವಚನದಲ್ಲಿ ಹೇಳಿರುವ ಸಾಲುಗಳು ಆಕೆಯ ದಿಟ್ಟತನಕ್ಕೆ ನೀಡುವ ಸಾಲುಗಳೆಂದು ಪರಿಗಣಿಸಬಹುದು. "ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ. ನಂತರ ರೂಪಿತಳಾಗುತ್ತಾಳಷ್ಟೆ'ಎಂಬ ಬೋವಾಳ ಮಾತನ್ನು ಇಲ್ಲಿ ಗಮನಿಸಬಹುದು.

ಬೋವಾ ತನ್ನ ವಿಚಾರಧಾರೆಯನ್ನು ಸೈದ್ಧಾಂತಿಕ ಮಾದರಿಯಲ್ಲಿ ಯಾವ ಅಂಕಿತನಾಮವಿಲ್ಲದೆ ಯಾವ ಪುರುಷನ ಮಾಧ್ಯಮವಾಗಿಸದೆ ನೇರ ವಿಸ್ಮಯ ಮಂಡಣೆಯಾಗಿದೆ. ಆದರೆ ವಚನಕಾರ್ತಿಯರು ನೇರವಾಗಿ ವಿಷಯ ಮಂಡಣೆ ಮಾಡಿದರೂ ಪುರುಷನಾಮವುಳ್ಳ ಅಂಕಿತನಾಮ ಇಟ್ಟುಕೊಂಡು ತಮ್ಮ ವಚನ ಮಾಡಿದ್ದಾರೆ. ವಚನ ಸಾಹಿತ್ಯಕ್ಕೆ ಬೆನ್ನೆಲುಬಾಗಿ ನಿಂತ ಎಷ್ಟೋ ಜನ ಪುರುಷ ವಚನಕಾರರನ್ನು ನೆನೆಯುತ್ತಾ ವಚನ ರಚಿಸುವುದಕ್ಕೆ ಸಾಕ್ಷಿ ಇದೆ. ನೀಲಮ್ಮನ ಈ ವಚನವು ಬಸವನನ್ನು ನೆನೆಯುತ್ತಾ ಎಲ್ಲಾ ಹಂಗನ್ನು ಮೀರುವ ಸಂದರ್ಭವನ್ನು ಕಾಣಲು ಸಾಧ್ಯವಿದೆ.

"ಲಿಂಗದ ಹಂಗಿಗಳಲ್ಲ ನಾನು ಬಸವಾ
ಜಂಗಮದ ಹಂಗಿಗಳಲ್ಲನಾನು ಬಸವಾ
ಪ್ರಸಾದದ ಹಂಗಿಗಳಲ್ಲ ನಾನು ಬಸವಾ
ಉಭಯ ಸುಖದ ಪರಿಣಾಮವಿಡಿದು ನಿಂದವಳಲ್ಲ ನಾನು ಬಸವಾ
ಏನುವನರಿತವಳಲ್ಲ ನಾನು ಬಸವಾ
ಎಲ್ಲವ ನನ್ನಲ್ಲಿ ನೆಲೆಗೊಳಿಸಿದಗ ಬಸವ
ಪ್ರಸನ್ನ ಮೂರ್ತಿಯಲಡಗಿದ ಬಸವನ ಇರವ ಕಂಡು

ಬದುಕಿದೆನಯ್ಯಾ ಸಂಗಯ್ಯಾ'

ಹೀಗೆ ಬೋವಾಳ ಚಿಂತನೆಯ ಒಟ್ಟು ಆಶಯ, ಸಂಘಟನೆಯ ಶಕ್ತಿ, ಸಮಾನತೆ, ಅಂಶಗಳು ವಚನಸಾಹಿತ್ಯದಲ್ಲಿ ಎಳೆಯಾಗಿ ಕಂಡು ಬರುತ್ತದೆ. ಬೋವಾಳನ್ನು ಓದಿರುವ, ಓದುತ್ತಿರುವ ನಾವುಗಳು ಚರಿತ್ರೆಯನ್ನು ಪುನಃ ಕಟ್ಟಿಕೊಳ್ಳುವ ಹೊಸ ರೂಪ ಕೊಡುವ, ಹೊಸ ರೀತಿಯಲ್ಲಿ ಗ್ರಹಿಸುವ, ಚಾರಿತ್ರಿಕ ಸತ್ಯಗಳಿಗೆ ಒಂದು ಚೌಕಟ್ಟನ್ನು ಒದಗಿಸುವ ಕೆಲಸ ಮಾಡಬಹುದು.

ಪಾಶ್ಚಾತ್ಯ ಮಾದರಿಯನ್ನು ಅನುಸರಿಸಿದರೂ ಸಹ ಕನ್ನಡ ಸಾಹಿತ್ಯಕ್ಕೆ ಇರುವ ತನ್ನದೇ ಆದ ಅನನ್ಯತೆಯನ್ನು ಹೊಂದಿದೆ ಎಂಬುದು ಬೋವಾ ಮತ್ತು ಕನ್ನಡ ಸಾಹಿತ್ಯವನ್ನು ಚರ್ಚೆ ಮಾಡುವ ಹೊತ್ತಿಗೆ ನಮಗೆ ಒಂದು ದೃಷ್ಟಿಕೋನ ಸಿಗುತ್ತದೆ. ಬಿಡಿ ಬಿಡಿಯಾಗಿರುವ ನಿರ್ದಿಷ್ಟ ಸೈದ್ಧಾಂತಿಕ ಮಾದರಿಯನ್ನು ಅರಿಯದೆ ಇರುವ ಎಷ್ಟೋ ಪಠ್ಯಗಳಿಗೆ ಒಂದು ತಾತ್ವಿಕವಾದ ಆಲೋಚನಾ ಕ್ರಮ ಸಿಗುತ್ತದೆ ಎಂಬುದನ್ನು ಅರಿಯಲು ಸಹಾಯಕವಾಗಿದೆ.

ಕನ್ನಡ ಚಿಂತನೆಯೊಟ್ಟಿಗೆ ಬೋವಾಳ ಚಿಂತನೆ ಅಪ್ರಸ್ತುತವೆಂದು ಅನಿಸಿದರೂ ಕನ್ನಡ ಸಾಹಿತ್ಯ, ಸಂಸ್ಕೃತಿ, ಪರಂಪರೆ, ಭಾಷೆ, ಜನಾಂಗ ಚರಿತ್ರೆ ಇವೆಲ್ಲವನ್ನು ಸೈದ್ಧಾಂತಿಕ ಮಾದರಿಯಲ್ಲಿ ನೋಡುವ, ಮೇಲೆ ತಿಳಿಸಿದ ಎಲ್ಲಾ ವಿಷಯಗಳು ಸ್ತ್ರೀವಾದಿ ಚಿಂತನೆಯೊಟ್ಟಿಗೆ, ಸ್ತ್ರೀಪರ ಕಾಳಜಿಯೊಟ್ಟಿಗೆ ಹೇಗೆ ಪೂರಕವಾಗಿ ಜೊತೆಗೂಡುವ ಕ್ರಮಬದ್ಧತೆಯನ್ನು ತಿಳಿಯಲು ಸಾಧ್ಯವಾಗಿದೆ. ಜನಪದ ಸಾಹಿತ್ಯದಲ್ಲಿ ಕಾಣಬರುವ ಎಷ್ಟೋ ದನಿಗಳು ಬೇರೆ ಬೇರೆ ರೀತಿಯ ಅರ್ಥವಂತಿಕೆಯಿಂದಿದ್ದರೂ ಸಹ ಅದರ ತುಡಿತ ಒಂದೇ ಎನ್ನುವ ವಿಧಾನವನ್ನು ನಾವು ಮೂಲಕ ಕಾಣಲು ಸಾಧ್ಯವಾಗಿದೆ. ಕಾಲ, ದೇಶ, ಜನಾಂಗಗಳನ್ನು ಮೀರಿದ ಮಾನವೀಯ ಮೌಲ್ಯವನ್ನು ಜನಪದರು ಸಾರಿರುವುದು ಕಾಣಬರುತ್ತದೆ.

೧೨ನೇ ಶತಮಾನದ ವಚನ ಚಳುವಳಿಯ ಸಂದರ್ಭವನ್ನು ಲಿಂಗ ಸಮಾನತೆಗಾಗಿ ಹಂಬಲಿಸಿದ ಮಹೋನ್ನತ ಚಳುವಳಿಯಾಗಿ ನಿರ್ವಚಿಸಲಾಯಿತು. ಇದರಿಂದಾಗಿ ಕನ್ನಡ/ ಕರ್ನಾಟಕದ ಸ್ತ್ರೀವಾದಿ ಚಿಂತನೆಯು ವಚನಚಳುವಳಿಯ ಅಸ್ಮಿತೆಯೊಂದಿಗೆ ಅಕ್ಕಮಹಾದೇವಿಯ ಆದರ್ಶ ಸ್ಮರಣೆಯೊಂದಿಗೆ ನಿರ್ವಚನಗೊಳ್ಳಬೇಕಾದ ಸ್ತ್ರೀವಾದವಾಗಿ ಸ್ವಾತಂತ್ರ್ಯದ ಆಸುಪಾಸಿನಲ್ಲಿಯೇ ರೂಢಿಗೆ ಬಂದಿತು. ವೈದಿಕ ಹಾಗೂ ವೀರಶೈವ

ಸಮುದಾಯಗಳ ಸಾಂಸ್ಕೃತಿಕ ರಾಜಕಾರಣದ ನೆರಳಲ್ಲಿ ರೂಪುಗೊಂಡ ಕರ್ನಾಟಕದ ಸ್ತ್ರೀವಾದವೇ ಸ್ವಾತಂತ್ರ್ಯಾನಂತರದ ಮೂರು ದಶಕಗಳು ಕರ್ನಾಟಕದಲ್ಲಿನ ಸ್ತ್ರೀವಾದಿ ಚಿಂತನೆಯ ಕೇಂದ್ರವಾಗಿ ಮುಂದುವರೆಯಿತು. ಸ್ತ್ರೀವಾದದ ಮೂರ್ತರೂಪಗಳಾದ ಗಾರ್ಗಿ, ಮೈತ್ರೇಯಿ, ಕಾತ್ಯಾಯಿನಿಯರೊಂದಿಗೆ ಅಕ್ಕಮಹಾದೇವಿಯು ತನ್ನ ಸ್ಥಾನ ಸ್ಥಿರಪಡಿಸಿಕೊಂಡಳು. ಅಕ್ಕಮಹಾದೇವಿಯು ಕರ್ನಾಟಕದ ಕೊಡುಗೆಯಾಗಿ ಭಾರತೀಯ ಸ್ತ್ರೀವಾದವನ್ನು ಪ್ರವೇಶಿಸಿ ಅದನ್ನು ಪುಷ್ಟಿಗೊಳಿಸಿದಳು. ಭಾರತ ಜನನಿಯ ತನುಜಾತೆಯಾದ ಕರ್ನಾಟಕ ಅದೇ ಸ್ವರೂಪದಲ್ಲಿ ಭಾರತೀಯ ಸ್ತ್ರೀವಾದವನ್ನು ಪ್ರವೇಶಿಸಿತು ಎಂದು ಡಾ. ಉಷಾರವರು ತಮ್ಮ ''ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ'' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

ಜಾನಪದ ಸಾಹಿತ್ಯ ವಚನ ಸಾಹಿತ್ಯ ಇವುಗಳಿಗೆ ಮಹಿಳೆಯರು ನೀಡಿರುವ ಕೊಡುಗೆ, ಸಾಹಿತ್ಯ ರಚನೆಗೆ ತೊಡಗಿದ್ದು ಕನ್ನಡ ಸಾಹಿತ್ಯವು ಸ್ತ್ರೀವಾದಕ್ಕೆ ಪೂರ್ವ ಪೀಠಿಕೆ ಹಾಕಿಕೊಟ್ಟಂತೆ ಆಗಿದೆ ಎನ್ನಬಹುದು.

ಅಡಿಟಿಪ್ಪಣಿ

---

1. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಹಂಪಿ ಪ್ರಸಾರಾಂಗ ಪ್ರಕಟಣೆ
2. ಶಿವಶರಣೆಯರ ವಚನಸಂಪುಟ, ವೀರಣ್ಣ ರಾಜೂರ (ಸಂ.)

# ಅಧ್ಯಾಯ - 4

## ಸಮಕಾಲೀನ ಸ್ತ್ರೀವಾದ ಮತ್ತು ಸಿಮೋನ್ ದ ಬೋವಾ

**ಹಿನ್ನೆಲೆ :** ಸ್ತ್ರೀವಾದ ಅಥವಾ ಫೆಮಿನಿಸಂ ಎನ್ನುವುದು ಒಂದು ಜೀವನ ಸಿದ್ಧಾಂತ. ಅದು ಸ್ತ್ರೀ - ಪುರುಷರ ನಡುವಿನ ಲಿಂಗಾಧಾರಿತ ತಾರತಮ್ಯಗಳ ಪ್ರಚಲಿತ ವ್ಯವಸ್ಥೆಯನ್ನು ಬದಲಾಯಿಸಲು ಹಕ್ಕೊತ್ತಾಯಿಸುತ್ತದೆ ಮತ್ತು ಸಾಮಾಜಿಕ, ರಾಜಕೀಯ, ಆರ್ಥಿಕ ಮುಂತಾದ ಬದುಕಿನ ನೆಲೆಗಳಲ್ಲಿ ಸ್ತ್ರೀಪುರುಷರನ್ನು ಸಮಾನವಾಗಿ ಸ್ಥಾಪಿಸಬಲ್ಲ ವ್ಯವಸ್ಥೆಗಾಗಿ ನಡೆಯುವ ಹೋರಾಟವೇ ಅದರ ಮುಖ್ಯವಾದ ಕಾರ್ಯವಿಧಾನವಾಗಿದೆ.[1]

ಸ್ತ್ರೀಪುರುಷರ ನಡುವೆ ಸಮಾನ ಪಾತಳಿಯ ಆಶಯದೊಂದಿಗೆ, ಮಾನವೀಯ ಮೌಲ್ಯಗಳನ್ನು ಸಾರುವಂತೆ ಮಾಡಿದ ಹೋರಾಟ ಎಂದೇ ಹೇಳಬಹುದು. (ಸ್ತ್ರೀನಿಷ್ಠ ವಿಮರ್ಶೆ ಎನ್ನುವುದು  ಫೆಮಿನಿಸ್ಟ್ ಕ್ರಿಟಿಸಂ ಎಂಬ ಪದಕ್ಕೆ ಸಂವಾದಿಯಾಗಿದೆ) ಪಾಶ್ಚಾತ್ಯ ಜಗತ್ತಿನಲ್ಲಿ ಸ್ತ್ರೀ ವಾದ ವಿಮರ್ಶೆಯ ಉಗಮವು ೧೯೬೦ರ ದಶಕದಲ್ಲಿ ಆಯಿತೆಂದು ಗುರುತಿಸಬಹುದು. ಆದರೆ ಈ ವಿಮರ್ಶೆಯ ಹಿನ್ನೆಲೆಯಲ್ಲಿ ಸುಮಾರು ಇನ್ನೂರು ವರ್ಷಗಳಷ್ಟು ಹಳೆಯದಾದ ಸ್ತ್ರೀ ವಿಮೋಚನೆಯ ಹೋರಾಟಗಳ ಇತಿಹಾಸವಿದೆ.[2]

ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದದ ಚಳುವಳಿ ಬಹಳ ತೀವ್ರತೆಯನ್ನು ಪಡೆದುಕೊಳ್ಳುತ್ತಲಿರುವುದು ನಮಗೆಲ್ಲರಿಗೂ ತಿಳಿದಿರುವ ಸಂಗತಿ. ಸ್ತ್ರೀವಾದಿ ಚಳುವಳಿ ಇಂದು ಜಾಗತಿಕ ಮಟ್ಟದಲ್ಲಿ ನಡೆದ ಚಳುವಳಿ ಆದರೂ ಕನ್ನಡದ ಮಟ್ಟದಲ್ಲಿ ಇಂದು ಕ್ರಿಯಾಶೀಲವಾಗುತ್ತಿರುವ ಬೆಳವಣಿಗೆ ಎಂದೇ ತಿಳಿಯಬಹುದು. ಚಿತ್ರಾಘೋಷಳ ಮಾತಿನಲ್ಲಿ ಹೇಳುವುದಾದರೆ 'ಅಸಹಜವಾದ ಮತ್ತು ನಿರರ್ಥಕವಾದ ಕಟ್ಟಳೆಗಳನ್ನು ತೆಗೆದು ಹಾಕಿ ಪ್ರತಿಯೊಬ್ಬರು ಸಮಾಜವು ನೀಡುವ ಎಲ್ಲಾ ಸದವಕಾಶಗಳನ್ನು ಸರಿಯಾಗಿ ಯಾವ ನಿರ್ಬಂಧವಿಲ್ಲದೆ ತಮ್ಮ ವ್ಯಕ್ತಿತ್ವದ ಬೆಳವಣಿಗೆ ಮತ್ತು ಅಭ್ಯುದಯಕ್ಕೆ ಉಪಯೋಗಿಸಿಕೊಳ್ಳುವುದು.3 ಸ್ತ್ರೀವಾದ, ಸ್ತ್ರೀವಾದಿ ಚಿಂತನೆ, ಸ್ತ್ರೀತ್ವ ಎಂಬ ಅಂಶಗಳು ಜಾಗೃತಗೊಂಡು ಹೊಸ ವಿಮರ್ಶಾಕ್ರಮವಾಗಿ ಬೆಳೆದು ಬರುತ್ತಲಿದೆ. ಸ್ತ್ರೀವಾದಿ ವಿಮರ್ಶೆ ಪ್ರಾರಂಭವಾದದ್ದು ಸಾಹಿತ್ಯ ಕೃತಿಗಳಲ್ಲಿ ಚಿತ್ರಣವಾದ ಸ್ತ್ರೀಪಾತ್ರಗಳು ಅಭ್ಯಾಸದೊಂದಿಗೆ ಮುಂದೆ ಅದು ಕ್ರೋಢೀಕರಿಸಿದ್ದು 'ಲೇಖಕಿಯಾಗಿ ಮಹಿಳೆ' ಎಂಬ ವಿಷಯದ ಮೇಲೆ[4]

ಹೆಣ್ಣಿಗೆ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕವಾಗಿ ಈ ಯಾವ ಕ್ಷೇತ್ರಗಳಲ್ಲೂ ಸ್ವಾತಂತ್ರ್ಯವಿಲ್ಲದೆ ಎಲ್ಲಾ ರೀತಿಯ ಸ್ವಾತಂತ್ರ್ಯಗಳು ಪುರುಷನಿಗಷ್ಟೇ ಸೀಮಿತವಾಗಿದ್ದವು. ಸ್ತ್ರೀ ಎನ್ನುವುದು ಆಯಾ ದೇಶ, ಕಾಲ, ಸಂಸ್ಕೃತಿ ಇವುಗಳೆಲ್ಲವನ್ನೂ ಪ್ರಭಾವಿಸಿ ವಿಭಿನ್ನ ಸ್ವರೂಪ ಪಡೆದು ಮುಂದೆ ಸಾಗುತ್ತಿದೆ. ಈರೀತಿಯ ಹಿನ್ನೆಲೆಯು ಸ್ತ್ರೀವಾದ , ಸ್ತ್ರೀವಾದಿ ಚಿಂತನೆಗೆ ಹೊಸ ಹಾದಿ ತೆರೆದಿದೆ.

ಸ್ತ್ರೀವಾದಿ ಎನ್ನುವುದು ವ್ಯವಸ್ಥೆಯ ಭಾಗವಾಗಿ ಅದು ಅರಿವಿಲ್ಲದೆಯೆ ಬೆರೆತು ಹೋಗಿತ್ತು. ಬದುಕಿನ ಕ್ರಮ, ಜೈವಿಕವಾಗಿ ಭಿನ್ನವಾದ ಶ್ರೇಣೀಕರಣದ ಬದುಕಿನ ಪರತಮ ಸತ್ಯ ಈ ಎಲ್ಲಾ ಪ್ರಶ್ನೆಗಳಿಗೊಂದು ತಾತ್ವಿಕ ಸ್ವರೂಪ ತಾರ್ಕಿಕ ಉತ್ತರ ಪಡೆದುಕೊಂಡಾಗ ಸ್ತ್ರೀವಾದ ಆರಂಭವಾಯಿತು.

'ತೃತೀಯ ವಿಶ್ವದ ಸ್ತ್ರೀವಾದವು ಪಶ್ಚಿಮದ ಹೇರಲ್ಲ. ನಿಜವಾಗಿ ಸ್ತ್ರೀಯರನ್ನು ಬಾಧಿಸುವ ಭೌತಿಕ ಮತ್ತು ಮತೀಯ ಬದಲಾವಣೆಗಳ ನಿರ್ದಿಷ್ಟ ಚಾರಿತ್ರಿಕ ಸನ್ನಿವೇಶಗಳ ಫಲ' ಎಂದು ಶಿವರಾಮ ಪಡಿಕ್ಕಲ್‌ರವರು ಮಹಿಳಾ ಪ್ರಶ್ನೆ ಮತ್ತು ಅವರ ರಾಷ್ಟ್ರೀಯವಾದೀ ಪರಿಹಾರ' ಎಂಬ ಲೇಖನದಲ್ಲಿ ತಿಳಿಸುತ್ತಾರೆ. [5]

ಸ್ತ್ರೀವಾದ ಎಂದರೆ ಮೂಲಭೂತವಾಗಿ ಸಮಾಜದಲ್ಲಿನ ಸ್ತ್ರೀಶೋಷಣೆ ಹಾಗೂ ಗಮನವನ್ನು ಕುರಿತ ಪ್ರಜ್ಞಾಪೂರ್ವಕ ಎಚ್ಚರ. ''ಸ್ತ್ರೀ''ಯನ್ನು ಕುರಿತ ಗ್ರಹಿಕೆ, ವಿವರಣೆ, ವಿಶ್ಲೇಷಣೆ, ಪುನರ್ ಮೌಲ್ಯೀಕರಣ ಪ್ರಯತ್ನಕ್ಕೆ ಸೂಕ್ತವಾದ ತಾತ್ವಿಕತೆಯನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯೇ ಸ್ತ್ರೀವಾದ'ವಾಗಿದೆ ಎನ್ನುವ ನಿಲುವು ಇದೆ.[6]

ಸ್ತ್ರೀವಾದ ಓದುವಿಕೆ ಎನ್ನುವುದು ರೋಲಾಬಾರ್ತ ಪ್ರತಿಪಾದಿಸಿದ ಓದುವಿಕೆಯನ್ನು ಕುರಿತ ವಿಮರ್ಶಾ ಪರಿಕಲ್ಪನೆ ಮತ್ತು ಸ್ತ್ರೀವಾದ ಸಿದ್ಧಾಂತಗಳ ಒಂದು ಸಂಯುಕ್ತ ಪದವಾಗಿದೆ. ಪಶ್ಚಿಮದ ದೇಶಗಳಲ್ಲಿ ಮಹಿಳಾ ವಿಮೋಚನೆ ಚಳುವಳಿಗಳ ಪರಿಣಾಮವಾಗಿ ಹುಟ್ಟಿ ಬೆಳೆದಿರುವ ಸ್ತ್ರೀವಾದಿ ಚಿಂತನೆಯ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಸ್ತ್ರೀಪುರುಷ ನಡುವಿನ ಅಧಿಕಾರದ ಸಂಬಂಧಗಳನ್ನು ಬದಲಾಯಿಸುವ ಗುರಿಯುಳ್ಳ ಒಂದು ರಾಜಕೀಯ ಹೋರಾಟದ ಸಿದ್ಧಾಂತವಾಗಿದೆ. ವರ್ಗ, ಜನಾಂಗಗಳಂತೆ ಲಿಂಗ ಪ್ರಬೇಧ ಕೂಡ ಸಾಮಾಜಿಕವಾಗಿ ಕಟ್ಟಲ್ಪಟ್ಟಿರುತ್ತದೆ. ಸ್ತ್ರೀ ಪುರುಷರ ಎನಿಸಿದರೆ, ಸಾಮಾಜಿಕವಾಗಿ ಈ

ಲಿಂಗಗಳ ಸುತ್ತ ರೂಪುಗೊಂಡಿರುವ ಗುಣ, ಸ್ವಭಾವ, ಲಕ್ಷಣ, ಶಕ್ತಿ, ಸಾಮರ್ಥ್ಯಗಳ ಭಿನ್ನತೆಗಳು ಲಿಂಗಪ್ರಬೇಧವೆನಿಸುತ್ತದೆ.[7]

ಸ್ತ್ರೀವಾದ ಎನ್ನುವುದು ಒಂದು ಗಂಭೀರ ಚಿಂತನೆ. ಜೀವನಕ್ರಮ ಪ್ರಾಮಾಣಿಕ ನಂಬಿಕೆ, ಪ್ರತಿಭಾವನಾತ್ಮಕ ಹೋರಾಟದ ತಾತ್ವಿಕತಕೆ.[8]

೧೯೬೦ರ ದಶಕದ ಉತ್ತರಾರ್ಧದಲ್ಲಿ ಪಶ್ಚಿಮದಲ್ಲಿ ಸಂಭವಿಸಿದ ಅಂತರಾಷ್ಟ್ರೀಯ ಮಹಿಳಾ ಚಳುವಳಿಯ ಮಹಿಳೆಯರ ರಾಜಕೀಯ, ಆರ್ಥಿಕತೆ, ಹಕ್ಕುಗಳು, ಜನಾಂಗೀಯ ಗುಲಾಮಗಿರಿಯ ಪದ್ಧತಿ ಮುಂತಾದ ಧ್ಯೇಯವನ್ನು ಹೊಂದಿದ್ದು ಈ ಚಳುವಳಿಯ ಕಾವಿನಿಂದ, ಸ್ತ್ರೀವಾದಿ ವಿಮರ್ಶೆ ಹುಟ್ಟಿತು. ಆರಂಭದ ಹಂತದಲ್ಲಿ ಸ್ತ್ರೀವಾದಿ ಸಾಹಿತ್ಯವಿಮರ್ಶೆಯು ಸಾಹಿತ್ಯದಲ್ಲಿನ ರೂಢಿಗತವಾದ ಸ್ತ್ರೀ ವೇಷದ ಅಂಶಗಳನ್ನು ಸ್ತ್ರೀಯರನ್ನು ದೇವತೆ ರಾಕ್ಷಸಿಯರ ಸಿದ್ಧ ಪ್ರತೀಕಕಳಲ್ಲಿ ಚಿತ್ರಿಸಿರುವುದನ್ನು ಶ್ರೇಷ್ಠ ಕೃತಿಗಳಲ್ಲೂ, ಜನಪ್ರಿಯ ಸಾಹಿತ್ಯದಲ್ಲೂ ಸಾಹಿತ್ಯಕವಾದ ಸ್ತ್ರೀ ನಿಂದನೆ, ಬೆದರಿಕೆ, ತಂತ್ರಗಳಿರುವುದನ್ನು ಬಯಲಿಗೆಳೆಯುವತ್ತ ತನ್ನ ಗಮನವನ್ನು ಕೇಂದ್ರೀಕರಿಸಿತ್ತು.9

ಹೀಗೆ ಕನ್ನಡ ಸ್ತ್ರೀವಾದಿ ಚಿಂತನೆಯೂ ಸಹ ದಿಢೀರನೆ ಹುಟ್ಟಿಕೊಂಡಿದ್ದಲ್ಲ. ಕಾಲದ, ದೇಶದ ಸಂದರ್ಭಗಳು ಒತ್ತಡಗಳು, ಸಂಸ್ಕೃತಿ, ಪರಂಪರೆ, ಇವುಗಳೊಂದಿಗೆ ಕೂಡಿ ಬಂದಂತಹ ಸಂಗತಿ ಎನ್ನುವುದು ತಿಳಿದು ಬರುತ್ತದೆ.

ಬೋವಾ ಸಹ ಸ್ತ್ರೀವಾದಿ ಚಿಂತನೆಯನ್ನು ಗ್ರಹಿಸುವುದು ರಾಜಕೀಯ, ಸಾಮಾಜಿಕ, ಜೈವಿಕ, ಚಾರಿತ್ರಿಕ ಚಿಂತನೆಗಳನ್ನು ಮೀರಿ ಬೆಳೆದ ಚಿಂತನೆಯ ಕ್ರಮವಾಗಿಯೇ ಎಂಬುದು ತಿಳಿದು ಬಂದಿದೆ. ಹೆಣ್ಣು ಹೆಣ್ಣಾಗಿ ರೂಪಿತಳಾಗುವುದು ಸಿದ್ಧಮಾದರಿಯಲ್ಲ. ಕಾಲ, ದೇಶ, ಚಾರಿತ್ರಿಕ ಹಿನ್ನೆಲೆಯಲ್ಲಿ ಎಂಬ ಅಂಶ ನಮಗೆ ತಿಳಿದುಬರುತ್ತದೆ.

ಬೋವಾ ತನ್ನ 'ದಿ ಸೆಕೆಂಡ್ ಸೆಕ್ಸ್' ಎಂಬ ಕೃತಿಯಲ್ಲಿ ಮಂಡಿಸಿರುವ ಸ್ತ್ರೀವಾದ ಏಕಮುಖಿಯಾದುದಲ್ಲ. ಸ್ತ್ರೀವಾದಿ ಚಿಂತನೆಯು ಬೇರೆ ಬೇರೆ ಶಿಸ್ತುಗಳ ಜೊತೆಗೂಡಿ ಬೆಳೆಯುತ್ತಲಿದೆ. ಎಲ್ಲಾ ಶಿಸ್ತುಗಳೊಟ್ಟಿಗೆ ಎಲ್ಲಾ ಕಾಲಕ್ಕೂ ಜಾಗತಿಕವಾಗಿ ಅನ್ವಯಿಕವಾಗುವಂತ ಚಿಂತನೆಯ ಕ್ರಮವನ್ನು ಬೋವಾ ನಿರೂಪಿಸುವುದು ಕಾಣಬಹುದು.

ಬೋವಾಳನ್ನು ಆದಿಸ್ತ್ರೀವಾದಿ ಚಿಂತಕಿ ಎಂದು ಕರೆಯಬಹುದಾದರೆ ಅದಕ್ಕೆ ಪ್ರಮುಖ ಕಾರಣಗಳಿವೆ. 'ದಿ ಸೆಕೆಂಡ್ ಸೆಕ್ಸ್' ಕೃತಿಯು ಕೇವಲ ಕೆಲವೇ ಕೆಲವು ಅಂಶಗಳನ್ನು ನಮ್ಮ ಮುಂದಿಡುವುದಿಲ್ಲ. ಇಂದು ಸ್ತ್ರೀವಾದಿ ಚಿಂತನೆಯ ಪ್ರಮುಖ ಪಂಥಗಳೊಟ್ಟಿಗೆ ಬೋವಾಳ ಚಿಂತನೆ ನಿಲ್ಲಬಲ್ಲ ಪ್ರಮುಖ ಸ್ತ್ರೀವಾದಿ ಪಂಥಗಳೊಟ್ಟಿಗೆ ಬೋವಾಳ ಚಿಂತನೆಯನ್ನು ಇಟ್ಟು ನೋಡಬಹುದಾಗಿದೆ. ಅವುಗಳಂದರೆ -

1. ಆಂಗ್ಲ-ಅಮೇರಿಕದ ಸ್ತ್ರೀವಾದ
2. ತೀವ್ರಗಾಮಿ ಮತ್ತು ಸಾಂಸ್ಕೃತಿಕ ಸ್ತ್ರೀವಾದ
3. ಕಪ್ಪು ಸ್ತ್ರೀವಾದ
4. ಲೆಸ್ಬಿಯನ್ ಸ್ತ್ರೀವಾದ
5. ಮಾರ್ಕ್ಸ್‌ವಾದಿ ಸ್ತ್ರೀವಾದ

ಬೋವಾ ಮೇಲೆ ಸೂಚಿಸಿರುವ ಎಲ್ಲಾ ಪಂಥಗಳ ಚರ್ಚೆಗಳೊಟ್ಟಿಗೆ ಕೂಡಿ ಬೆಳೆಯುವ ತಾತ್ವಿಕ ಅಂಶಗಳನ್ನು ತನ್ನ ಕೃತಿಯಲ್ಲಿ ಬೆಳೆಸಿದ್ದಾಳೆ. ಆದ್ದರಿಂದ ಬೋವಾಳ ಚಿಂತನೆ ಎಲ್ಲಾ ಪಂಥಗಳಲ್ಲಿನ ಎಳೆಯನ್ನು ಹೊರ ತೆಗೆಯುತ್ತದೆ. ಆಕೆ ಪ್ರಸ್ತುತಳಾಗುತ್ತಾ ಹೋಗುವುದಕ್ಕೆ ಪ್ರಮುಖ ಕಾರಣಗಳು ಇವೆ.

### ಆಂಗ್ಲ - ಅಮೇರಿಕದ ಸ್ತ್ರೀವಾದ

ಆಂಗ್ಲ-ಅಮೇರಿಕದ ಸ್ತ್ರೀವಾದಿ ಸಿದ್ಧಾಂತ ರೂಪಿಸುವುದರಲ್ಲಿ ಮಹತ್ವದ ಕೆಲಸ ಮಾಡಿರುವವರು. ಎಲೈನ್ ಶೋವಾಲ್ಟರ್' ಪ್ರತಿಷ್ಠಿತ ಸಾಹಿತ್ಯ ಪರಂಪರೆಯನ್ನು ಸ್ತ್ರೀವಾದಿ ದೃಷ್ಟಿಯಿಂದ ಮರು ಓದಿಗೆ ಒಳಗುಮಾಡುವ ಪ್ರಕ್ರಿಯೆಯನ್ನು ಫೆಮಿನಿಸ್ಟ್ ಕ್ರಿಟಿಕ್ ಎಂದೂ, ಮಹಿಳಾ ಬರಹಗಳ ಅಧ್ಯಯನವನ್ನು ಗೈನೋಕ್ರಿಟಿಸಿಸಂ ಎಂದು ಕರೆದು ಇವುಗಳಿಗೆ ತಾತ್ವಿಕ ನಿರ್ವಚನವನ್ನು ಒದಗಿಸಲು ಯತ್ನಿಸಿದ್ದಾಳೆ. ಸಾಹಿತ್ಯದಲ್ಲಿರುವ ಸ್ತ್ರೀ ಪ್ರತೀಕಗಳು ಸಿದ್ಧ ಮಾದರಿಗಳು, ರೂಪಕಗಳು, ಸ್ತ್ರೀಯರಿಗೆ ಸಂಬಂಧಿಸಿದ ಆದರೆ ಕೈಬಿಟ್ಟ ಅಂಶಗಳು, ಸ್ತ್ರೀ ಕುರಿತ ಕಲ್ಪನೆಗಳು, ಸಾಹಿತ್ಯ ಚರಿತ್ರೆಯಲ್ಲಿ ಕಾಣುವ ಕಂದರಗಳು, ಸಾಹಿತ್ಯದ ತಾತ್ವಿಕ ಪರಿಕಲ್ಪನೆಗಳು ಮೊದಲಾದುವನ್ನು ಸಮಗ್ರವಾಗಿ ಮರುಪರೀಕ್ಷೆಗೆ ಗುರಿಪಡಿಸುವ ಚಾರಿತ್ರಿಕ ತನಿಖೆ ಎಂದು ಶೋವಾಲ್ಟರ್ ವಿವರಿಸುತ್ತಾಳೆ.[10]

ಆಂಗ್ಲ ಅಮೇರಿಕಾದ ಸ್ತ್ರೀವಾದ ಮಂಡಿಸುವಂತೆ ಪರಂಪರೆಯನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಮರುಓದಿಗೆ ಒಳಮಾಡು ಎನ್ನುವುದು ಸಿಮೊನ್‌ದ ಬೋವಾ ಕೇವಲ ನಿರ್ದಿಷ್ಟ ಪರಂಪರೆಯನ್ನು ಮರುಓದು ಮಾಡದೆ ಇಡೀ ಸ್ತ್ರೀಕುಲ ಬೆಳೆಸಿಕೊಂಡು ಬಂದಿರುವ ಪರಂಪರೆಯನ್ನು ವ್ಯಕ್ತಪಡಿಸಿರುವುದು ಗಮನಾರ್ಹ ಅಂಶವಾಗಿದೆ. ಮಹಿಳಾ ಬರಹಕ್ಕೆ ಅಧ್ಯಯನ ಎನ್ನುವುದು ನಿರ್ದಿಷ್ಟ ಕಾಲದ ದೇಶದ ಪ್ರಭಾವಕ್ಕೆ ಒಳಗಾಗಿರುತ್ತದೆ. ಸಾಹಿತ್ಯವನ್ನು ಪುನರ್‌ಮೌಲೀಕರಿಸುವುದರ ಜೊತೆಗೆ ಸ್ತ್ರೀಯ ಅಭಿವ್ಯಕ್ತಿ, ಕಾಳಜಿಯನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನ ಎನ್ನಬಹುದು. ಚರಿತ್ರೆಯಲ್ಲಿ ಹೆಣ್ಣನ್ನು ಕಟ್ಟಿಕೊಡುವ ಪ್ರಯತ್ನ.

## ತೀವ್ರಗಾಮಿ ಮತ್ತು ಸಾಂಸ್ಕೃತಿಕ ಸ್ತ್ರೀವಾದ

ಶೋವಾಲ್ಟರ್ ಪ್ರತಿಪಾದಿಸುವ ಸ್ತ್ರೀನಿಷ್ಠ ಸಾಹಿತ್ಯ ವಿಮರ್ಶೆ ಮತ್ತು ಸ್ತ್ರೀ ಪರಂಪರೆಗಳ ಪರಿಕಲ್ಪನೆಗಳಿಗೆ ಸ್ತ್ರೀವಾದದ್ದೇ ಚಾರಿತ್ರಿಕ ಹಿನ್ನಲೆಯಿದೆ. ಹೆಣ್ಣುತನವನ್ನೂ, ಸ್ತ್ರೀಸಂಬಂಧಿಯಾದ ಎಲ್ಲವನ್ನೂ ತಿರಸ್ಕಾರ, ಅವಹೇಳನಕ್ಕೆ ಒಳಗಾಗಿಸಿದ ಪಿತೃಪ್ರಧಾನ ವ್ಯವಸ್ಥೆಯ ಧೋರಣೆಗೆ ಸ್ತ್ರೀವಾದಿಗಳಲ್ಲಿ ಹುಟ್ಟಿದ ಬಲವಾದ ಪ್ರಕ್ರಿಯೆಯು ''ತೀವ್ರಗಾಮಿ ಸ್ತ್ರೀವಾದಕ್ಕೂ ಸಾಂಸ್ಕೃತಿಕ ಸ್ತ್ರೀವಾದಕ್ಕೂ ಅವಕಾಶ ಮಾಡಿಕೊಟ್ಟಿದೆ. ಸ್ತ್ರೀತ್ವದ ಗುಣಗಳನ್ನೇ ಬೇರೊಂದು ಉದ್ದೇಶದಿಂದ ಎತ್ತಿಹಿಡಿದ ಲೆಸ್ಬಿಯನ್ ಸ್ತ್ರೀವಾದಿಗಳು ಇದೇ ತಾತ್ವಿಕ ಮೂಲಕ್ಕೆ ಸೇರುತ್ತಾರೆ.[11]

ತೀವ್ರಗಾಮಿಗಳು ಪುರುಷಸಂಬಂಧವನ್ನು ಕಡ್ಡಾಯವಾಗಿ ಹೇರುವ ವಿವಾಹ, ಕುಟುಂಬ, ತಾಯ್ತನ ತನ್ನ ದೇಹ, ವ್ಯಕ್ತಿತ್ವಗಳ ಮೇಲೆ ಮಹಿಳೆ ಸ್ವಾಮ್ಯವನ್ನು ಪಡೆದುಕೊಳ್ಳುವುದೇ ಸ್ತ್ರೀ ವಿಮುಕ್ತಿಯ ಹಾದಿ ಎನ್ನುತ್ತಾರೆ. ಸೀಮೊನ್ ದ ಬೋವಾ ರಾಜಕೀಯವಾಗಿ, ಸಾಮಾಜಿಕವಾಗಿ, ಜೈವಿಕವಾಗಿ ಹೇಗೆ ಭಿನ್ನ ಅನ್ನುವುದರ ಜೊತೆಗೆ ಸ್ತ್ರೀವಾದವನ್ನು ಚರ್ಚಿಸುತ್ತಾ ಹೆಣ್ಣು ದೈಹಿಕವಾಗಿ ನಿಸರ್ಗದತ್ತವಾಗಿ ಪಡೆದವರ ಹೆರುವುದು, ಹೊರುವುದು ಎನ್ನುವುದು ಹೊರೆಯಾಗಬಾರದು. ಹೆರುವ ಹೊರುವ ಪ್ರಕ್ರಿಯೆಗೆ ಮಾತ್ರ ಹೆಣ್ಣು ಸೀಮಿತವಾಗಬಾರದೆಂಬ ಮಾತನ್ನು ಬೋವಾ ತನ್ನ ಚಿಂತನೆಯಲ್ಲಿ ವಿವರಿಸಿದ್ದಾಳೆ.

## ಸ್ತ್ರೀ ಸಂಸ್ಕೃತಿವಾದ

ಪುರುಷಾಧಿಕಾರದ ವಿರುದ್ಧ ಪ್ರತಿಭಟಿಸುವ ಒಂದು ಮುಖ್ಯ ವಿಧಾನವಾಗಿ ತೀವ್ರಗಾಮಿಗಳು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯನ್ನು ಅವಹೇಳನಗೊಳಿಸುವಂಥ ವರ್ತನೆ, ಸ್ವಭಾವ, ಗುಣಗಳನ್ನು ಧನಾತ್ಮಕವಾಗಿ, ಪ್ರಬಲಗೊಳಿಸಿ ಚಿತ್ರಿಸುವ ರೀತಿಯೊಂದನ್ನು ಆರಂಭಿಸಿದರು. ಮಾಟಗಾತಿಯರೆಂದು ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧ ಬಂಡೆದ್ದವರು ತಾಯ್ತನವೆಂಬುದು ಜೀವದಾಯಕ. ಜೀವರಕ್ಷಕ ಶಕ್ತಿ, ಶಿಶುಸಂಗೋಪನೆಯ ಹೆಣ್ಣಿಗೆ ವಿಶಿಷ್ಟವಾದ ವಾತ್ಸಲ್ಯಗುಣದ ಅಭಿವ್ಯಕ್ತ ಎಂದು ಮುಂತಾಗಿ ಹೆಣ್ತನದ ವೈಭವೀಕರಣದಲ್ಲಿ ತೊಡಗಿದಗರು. ಜೀವಶಾಸ್ತ್ರೀಯವಾದಗ ಹೆಣ್ತನವೇ ಬೇರೆ ಸಾಂಸ್ಕೃತಿಕ ರಚನೆಯಾದ ಸ್ತ್ರೀ ಸ್ವಬಾವ ಎಂಬುದೇ ಬೇರೆ ಎಂದು ಎಣಿಸದೆ ಹೆಣ್ಣಿನ ಸಂತಾನೋತ್ಪಾದನೆ ಶಕ್ತಿಯನ್ನೂ ಅವಳ ಮಾನಸಿಕ ಗುಣಗಳನ್ನು ಸಮೀಕರಿಸಿ ಎಲ್ಲಾ ಕಾಲದೇಶಗಳಲ್ಲಿ ಮಹಿಳೆಯರಲ್ಲಿ ಇದ್ದೇ ತೀರುವ ಒಂದು ಸ್ತ್ರೀಸತ್ವವಿದು. ಅಂತಃಸಾರರೂಪಿಯೆಂದು ಗುರುತಿಸಲು ಇವರು ಯತ್ನಿಸಿದರು. ಈ ವಾದದ ಪ್ರಬಲ ಪ್ರತಿಪಾದಕಿ ಮೇರಿ ಡೇಲಿ.[12]

ಸಿಮೊನ್ ದ ಬೋವಾ ಈ ರೀತಿಯ ಸಾಂಸ್ಕೃತಿಕ ಆಲೋಚನೆಗಳಿಗಿಂತ ಭಿನ್ನವಾಗಿ ಯೋಚಿಸಿದ್ದಾಳೆ. ತಾಯ್ತನ, ಹೆಣ್ತನ ಜೀವರಕ್ಷಣೆ ಪೊರೆಯುವುದು ಎನ್ನುವುದು ಒಂದು ವಿಶಿಷ್ಟವಾದ ಸಂಗತಿಯಾಗಿ ನೋಡದೆ ನಿಸರ್ಗದತ್ತವಾಗಿ ಸಿಕ್ಕಿರುವ ಒಂದು ಸಹಜ ಪ್ರಕ್ರಿಯೆ ಎಂದು ಹೇಳುತ್ತಾರೆ.

ಮೇರಿ ಡೇಲಿ ಸ್ವತಃ ತನ್ನ ಬರಹಗಳ ಮೂಲಕ ಎತ್ತಿ ಹಿಡಿದಳು. ಸ್ತ್ರೀ ಪ್ರತೀಕಗಳ ಕೊಂಡಾಟ, ಸ್ತ್ರೀಲಕ್ಷಣಗಳ ಆರಾಧನೆ, ಈ ವಾದಗಳನ್ನು ಸ್ತ್ರೀಯರ ವಿಶಿಷ್ಟ ಭಾಷೆಯೊಂದನ್ನು ರೂಪಿಸುವ ಯತ್ನ, ಸ್ತ್ರೀಯರ ಅನುಭವ, ಬದುಕಿನ ಕ್ರಮ, ಕುಶಲ ಕಲೆಗಾರಿಕೆ, ಹಾಡುಹಬ್ಬ, ಜಾನಪದ ಮುಂತಾದ ಎಲ್ಲವನ್ನೂ ಮೌಲಿಕಗೊಳಿಸುವ ಮೂಲಕ ಪ್ರತ್ಯೇಕ ಸ್ತ್ರೀಸಂಸ್ಕೃತಿಯನ್ನು ಪುನರಚಿಸುವ ಯತ್ನವನ್ನು ಈಕೆ ಹಾಗೂ ಇಂತಹುದೇ ದೃಷ್ಟಿಯುಳ್ಳ ಸ್ತ್ರೀವಾದಿಗಳು ಛಲದಿಂದ ನಿರ್ವಹಿಸುತ್ತಾರೆ.[13]

ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ಸ್ತ್ರೀವಾದಿ ಚಿಂತನಾಕ್ರಮವನ್ನು ಕಟ್ಟುವುದನ್ನು ಬೋವಾ ಒಪ್ಪುವುದಿಲ್ಲ. ಸ್ತ್ರೀವಾದ, ಸ್ತ್ರೀಯರ ಸಂವೇದನೆ ಸ್ತ್ರೀಯರ ಅನನ್ಯತೆ, ಇವೆಲ್ಲವೂ ಬೇರೆ ಬೇರೆಯಾಗಿದ್ದು ಆಯಾ ಕಾಲ ದೇಶದ ಒತ್ತಡದ ನಡುವಿನಲ್ಲಿ ನಿಂತು ಅದನ್ನು ಮೀರುವ ಹಾಗೆ ನಡೆದುಕೊಳ್ಳಬೇಕು. ''ಮಿಥ್ಯಾಕಲ್ಪನೆಗಳನ್ನು ಬೋವಾ ಒಪ್ಪದೆ ವಾಸ್ತವವನ್ನು ನಮ್ಮ ಮುಂದೆ ಇಡುವ ಪ್ರಯತ್ನ ಮಾಡುತ್ತಾಳೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

## ಕಪ್ಪು ಸ್ತ್ರೀವಾದ

'ಬಿಳಿಯ ಜಗತ್ತಿನ ಸ್ಥಾಪಿತ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಅಧೀನ ನೆಲೆಯ ಕಪ್ಪು ಮಹಿಳೆಯರ ಅನುಭವಗಳನ್ನು ಪುರುಷ ಪ್ರಧಾನ ವ್ಯವಸ್ಥೆಯೇ ನಿರ್ಲಕ್ಷಿಸುತ್ತದೆ ಎಂಬ ಬಲವಾದ ಆರೋಪದೊಂದಿಗೆ ಕಪ್ಪು ಸ್ತ್ರೀವಾದಿಗಳ ಪಂಥವೊಂದು ಹುಟ್ಟಿಕೊಂಡಿತು. ಬಿಳಿಯ ಮಹಿಳೆ ಮಹಿಳೆಯಾಗಿ ತನ್ನ ಜನಾಂಗದ ಪಿತೃಪ್ರಧಾನಡಿಯಲ್ಲಿ ಶೋಷಿತಳೇ ಇರಬಹುದು. ಆದರೆ ಆ ಜನಾಂಗದ ಸಾಮ್ರಾಜ್ಯಶಾಹಿ ಹಿತಾಸಕ್ತಿಯಲ್ಲಿ ಆಕೆ ಬಿಳಿಯ ಪುರುಷನ ಸಹಭಾಗಿಯೇ ಆಗಿರುತ್ತಾಳೆ. ಕಪ್ಪು ಜನಾಂಗ ಮತ್ತು ಕಪ್ಪು ಮಹಿಳೆಯರ ವಿಷಯದಲ್ಲಿ ಅವಳು ಶೋಷಕ ನೆಲೆಯಲ್ಲಿ ಇರುತ್ತಾಳೆಂಬುದು ಕಪ್ಪು ಸ್ತ್ರೀವಾದಿಗಳು ಹೂಡುವ ವಾದವಾಗಿದೆ.

ಕಪ್ಪುಸ್ತ್ರೀವಾದ ಎನ್ನುವುದರ ಬಗ್ಗೆ ಹೆಚ್ಚಾಗಿ ಎಲ್ಲೂ ಭಿನ್ನವಾಗಿ ಪ್ರಸ್ತಾಪಿಸಿಲ್ಲ. ಬೋವಾಳ ಚಿಂತನೆ ನಿರ್ದಿಷ್ಟ ಕಾಲ, ಜನಾಂಗ, ಭೌಗೋಳಿಕ ಎಲ್ಲೆಯನ್ನು ಮೀರಿದ ವಿಶ್ವದ ಮಹಿಳೆಯರೆಲ್ಲರ ಮಿಡಿತ ಎಂದೇ ಎಂದು ಹೇಳುವ ಸ್ತ್ರೀಗೆ ಜಾಗತಿಕ ನೆಲೆಯಲ್ಲಿ ಸ್ಥಾನವನ್ನು ಒದಗಿಸುವ ಕೆಲಸದಲ್ಲಿ ಬೋವಾ ನಿರತರಾಗಿರುವುದು ನಮಗೆ ತಿಳಿದಿದೆ. ಮೂಲದ ಜಾಡನ್ನು ಹಿಡಿದು ಲಿಂಗ ಅಸಮಾನತೆ ಎಂದರೇನು ? ಅವರು ಸಮಾಜದಲ್ಲಿ ರೂಪುಗೊಂಡಿರುವ ವಿಧಾನದ ಚರ್ಚೆಯ ಬಗ್ಗೆ ಬೋವ ಮಂಡಿಸುತ್ತಾಳೆ. ''ಇಡೀ ವಿಶ್ವದ ಎಲ್ಲಾ ಮಹಿಳೆಯರ ಮಿಡಿತಕ್ಕೆ ಒಟ್ಟಿಗೆ ಸ್ಪಂದಿಸಿದ ಚಿಂತಕಿ ಬೋವಾ ಎಂದು ಕರೆಯಬಹುದು''

## ಲೆಸ್ಬಿಯನ್ ಸ್ತ್ರೀವಾದ

ಹೆಣ್ತನದ ಸತ್ವ ಮತ್ತು ಲೈಂಗಿಕ ವ್ಯತ್ಯಾಸಕ್ಕೆ ಅತಿಯಾಗಿ ಒತ್ತುಕೊಟ್ಟ ಸ್ತ್ರೀವಾದಿ ಪಂಥಗಳಲ್ಲಿ ಸ್ತ್ರೀವಾದಿಗಳ ನಡುವೆಯೂ ತಮ್ಮ ಅಸ್ಥಿತ್ವ ಸ್ಥಾಪಿಸಲಿಕ್ಕಾಗಿ ಬಲವಾದ ಹಕ್ಕೊತ್ತಾಯ ಮಾಡಿ ತಮ್ಮನ್ನು ಗುರತಿಸುವಂತೆ ಮಾಡಿದ್ದು ಲೆಸ್ಬಿಯನ್ ಸ್ತ್ರೀವಾದಿಗಳ ವಿಶೇಷತೆ ಸ್ತ್ರೀಯರ ನಡುವಿನ ಲೈಂಗಿಕ ಸಂಬಂಧಕ್ಕೆ ಆದ್ಯತೆ ನೀಡಿ ಪುರುಷರ ಹೊರತಾಗಿಯೂ ತಮ್ಮ ವ್ಯಕ್ತಿತ್ವದ ಪರಿಪೂರ್ಣತೆ ಸಾಧ್ಯವೆಂದು ಸಮರ್ಥಿಸಿಕೊಳ್ಳುವುದಕ್ಕಾಗಿ ಲೆಸ್ಬಿಯನ್ ಸ್ತ್ರೀವಾದವು ಹುಟ್ಟಿತು. ಭಿನ್ನಲಿಂಗ ಸಂಬಂಧಕ್ಕೆ ಮಾತ್ರ ಗೌರವ ನೀಡುವ ಪಿತೃಪ್ರಧಾನ ವ್ಯವಸ್ಥೆಯ ಅಡಿಯಲ್ಲಿ ಪುರುಷಾಧಿಕಾರ ಸಂಸ್ಕೃತಿಯನ್ನು ಧಿಕ್ಕರಿಸಿ ಮಹಿಳೆಯರೇ ಪ್ರತ್ಯೇಕ ಸಮಾಜವಾಗಿ ತಮ್ಮ ಸಂಬಂಧಗಳನ್ನು ಗಟ್ಟಿಗೊಳಿಸಿಕೊಳ್ಳುವುದು, ಆ ಸ್ತ್ರೀ ಸಂಬಂಧಗಳ ಅನುಭವದ ದ್ರವ್ಯಗಳನ್ನೇ ಆಧಾರವಾಗಿಟ್ಟುಕೊಂಡು ತಮ್ಮೊಳಗಿನ ನಿಜಸತ್ವವನ್ನು ಪ್ರಾಮಾಣಿಕವಾಗಿ ಸಾಹಿತ್ಯದಲ್ಲಿ ಅಭಿವ್ಯಕ್ತಿಸುವುದು ಲೆಸ್ಬಿಯನ್ ಸ್ತ್ರೀವಾದಿ ಬರಹಗಾರರ ದೃಷ್ಟಿ. ಈ ಸ್ತ್ರೀವಾದಕ್ಕೆ ಹಾಗೂ ಬರಹಕ್ಕೆ ಮಾನ್ಯತೆ ಗಳಿಸಿಕೊಳ್ಳಲು ಪ್ರಮುಖವಾಗಿ ಆಗ್ರಹ ಪಡಿಸಿದವರೂ ಮೇರಿ ಡೇಲಿ ಮತ್ತು ಆಡ್ರಿಯನ್ ರಿಚ್.[14]

ಬೋವಾ ಲೆಸ್ಬಿಯನ್‌ರ ಬಗ್ಗೆ ಚರ್ಚೆ ಮಾಡಿದ್ದಾಳೆ. ಸಾಮಾಜಿಕವಾಗಿ ಹೆಣ್ಣು, ಹೆಣ್ಣಿನ ಸ್ಥಾನಗಳ ಮುಂದುವರೆದ ರೂಪ ಎಂದೇ ಹೇಳಬಹುದು. ಲೆಸ್ಬಿಯನ್ನರ ಬಗೆಗಳ ಬಗ್ಗೆಯೂ ಬೋವಾ ಚರ್ಚಿಸಿದ್ದಾಳೆ. ಸಮಾಜದಲ್ಲಿ ಪ್ರಸ್ತುತ ಚರ್ಚೆಯಾಗುತ್ತಿರುವ ಎಲ್ಲಾ ಸ್ತ್ರೀವಾದ ಕವಲುಗಳಿಗೆ ಬೋವಾಳ 'ದಿ ಸೆಕೆಂಡ್ ಸೆಕ್ಸ್' ಕೃತಿಯು ಪ್ರತಿಸ್ಪಂದಿಸುತ್ತಾ ಬಂದಿರುವ ಕ್ರಮವನ್ನು ಕಂಡುಕೊಳ್ಳಬಹುದಾಗಿದೆ. ಲೆಸ್ಬಿಯನ್ ಬಗ್ಗೆ ಬೋವಾ ಈ ರೀತಿ ಹೇಳುತ್ತಾಳೆ.

''ಸಲಿಂಗಕಾಮವು ಯಾರ ಬದುಕಿನ ಹಣೆಬರಹವೂ ಅಲ್ಲ, ಅದು ಬೇಕೆಂತಲೇ ಆರೋಪಿಸಿಕೊಂಡ ವಿಕೃತ ವರ್ತನೆಯೂ ಅಲ್ಲ. ನಿರ್ದಿಷ್ಟ ಸಂದರ್ಭದಲ್ಲಿ ಮಾಡಿಕೊಂಡ ಆಯ್ಕೆ ಅಷ್ಟೇ. ಅಂದರೆ ಅದಕ್ಕೆ ಪ್ರೇರಣೆಗಳಿರುತ್ತವೆ. ಮತ್ತು ಇಚ್ಛೆಯಿಂದಲೇ ಆಯ್ದುಕೊಂಡದ್ದಾಗಿರುತ್ತದೆ. ದೇಹರಚನೆಯ ಸಂದರ್ಭಗಳಾಗಲೀ ಮಾನಸಿಕ ಬೆಳವಣಿಗೆಯ ಹಂತಗಳಾಗಲೀ, ಸಾಮಾಜಿಕ ಸನ್ನಿವೇಶವಾಗಲೀ, ಯಾವುದೂ ಈ ಆಯ್ಕೆಗೆ ನೇರವಾದ, ಖಚಿತವಾದ ಕಾರಣವಲ್ಲ. ಆದರೆ ಹೀಗಾದುದಕ್ಕೆ ವಿವರಣೆ ನೀಡುವ ಇವೆಲ್ಲವೂ

ನೆರವಾಗಬಹುದಷ್ಟೆ. ಹೆಂಗಸು ತಾನು ಎದುರಿಸುವ ಸಂದರ್ಭದ ಸಮಸ್ಯೆಗಳಿಂದ ಅದರಲ್ಲೂ ಲೈಂಗಿಕ ನೆಲೆಗಳ ಸಮಸ್ಯೆಗಳಿಂದ ಹೊರಬರಲುಕಂಡುಕೊಳ್ಳುವ ಹಲವು ದಾರಿಗಳಲ್ಲಿ ಇದೂ ಒಂದು ಅಷ್ಟೇ ಎಲ್ಲಾ ಮಾನವ ವರ್ತನೆಗಳೂ ನಟನೆಗಳಾಗಿ ಅಸಮತೋಲನವಾಗಿ ಕಳವಳವಾಗಿ ಮಿಥ್ಯೆಯಾಗಿ ಪರಿಣಮಿಸುವಂತೆ ಲೆಸ್ಬಿಯಾನ್ ಪ್ರವೃತ್ತಿಯೂ ಕೂಡಾ ಆಗುತ್ತದೆ. ಅಥವಾ ನಿಜಜೀವನದಲ್ಲಿ ಕೆಲವೊಮ್ಮೆ ಮನುಷ್ಯರ ವರ್ತನೆಗಳುಕೆಟ್ಟ ನಂಬಿಕೆಗಳಾಗಿ ಸೋಮಾರಿತನವಾಗಿ ಸುಳ್ಳಾಗಿ ಪರಿವರ್ತಿತವಾಗುವಂತೆ ತ್ಯಾಗ, ಸ್ವಾತಂತ್ರ್ಯ, ನಿರಾಳತೆಗಾಗಿಯೂತೋರಬಹುದು. ಲೆಸ್ಬಿಯನ್ ಪ್ರವೃತ್ತಿಗೂ ಈ ಗತಿ ತಪ್ಪಿದ್ದಲ್ಲ.[15]

## ಮಾರ್ಕ್ಸ್‌ವಾದಿ ಸ್ತ್ರೀವಾದ

ಸಾಮಾಜಿಕ ವ್ಯವಸ್ಥೆಯು ಸಮಗ್ರ ಪರಿವರ್ತನೆಯ ಮೂಲಕ ಮಾತ್ರ ಸಮಾನತೆಯನ್ನು ಆಧರಿಸಿದ ಸಮಾಜವನ್ನು ಕಟ್ಟಲು ಸಾಧ್ಯವೆಂದು ದೃಢವಾಗಿ ನಂಬುವ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಮಾರ್ಕ್ಸ್ ಏಂಗೆಲ್ಸರ ವರ್ಗ ವಿಶ್ಲೇಷಣಾ ತಾತ್ವಿಕತೆಯನ್ನು ಮಹಿಳೆಯ ಆರ್ಥಿಕ/ಭೌತಿಕ ಶೋಷಣೆಯ ಚರಿತ್ರೆಗೂ ವಿಸ್ತರಿಸಲೂ ಯತ್ನಿಸುತ್ತಾರೆ. ಲಿಂಗಾಧಾರಿತ ಶ್ರಮವಿಭಜನೆ ಮತ್ತು ಅವರಿಂದ ಉಂಟಾಗಿರುವ ಸ್ತ್ರೀ ಪುರುಷರೊಳಗಿನ ಸಾಮಾಜಿಕ ಅಸಮಾನತೆಗಳು ಇವರ ಚರ್ಚೆಯ ಕೇಂದ್ರ ವಿಷಯಗಳು. ಕುಟುಂಬದ ಸ್ವರೂಪ, ಹೆಣ್ಣಿನ ಮನೆಗೆಲಸದ ದುಡಿಮೆಯ ಸ್ವರೂಪ, ಅದಕ್ಕೂ ಸಂತಾನೋತ್ಪಾದನೆಗೂ ಇರುವ ಸಂಬಂಧಗಳು, ಮಾರ್ಕ್ಸ್‌ವಾದಿ ಸ್ತ್ರೀವಾದಿಗಳ ಮುಖ್ಯ ಕಾಳಜಿಗಳು, ಬ್ರಿಟನ್ನಿನ ಜೂಲಿಯಟ್ ಮಿಚೆಲ್, ಶೀಲಾ ರೋಬೋತಮ್, ಮಿಶೆಲ್ ಬ್ಯಆರಟ್ ಮುಂತಾದ ಸಾಂಪ್ರದಾಯಿಕ ಮಾರ್ಕ್ಸ್‌ವಾದದ ಚಿಂತನೆಯು ಮಹಿಳೆಯರ ಗೃಹಕೃತ್ಯವೂ ಸೇರಿದಂತೆ ಹಲವು ಕಾರ್ಯಚಟುವಟಿಕೆಗಳನ್ನು ನಿರ್ಲಕ್ಷಿಸಿರುವುದೆಂದು ಗಮನ ಸೆಳೆದರು. ಮನೆಗೆಲಸ, ಸಂತಾನ, ಸಂಗೋಪನೆಗಳಿಗೆ ದುಡಿಮೆಯ ಬೆಲೆಯಾಗಲೀ, ಮಿಗುತಾಯ ಮೌಲ್ಯವಾಗಲೀ ಇಲ್ಲವಾಗಿರುವುದನ್ನು ಇವರು ಗುರುತಿಸಿದರು. ಸಂತಾನೋತ್ಪಾತನೆ, ತತ್ಸಂಬಂಧಿತ ಮನೆಗೆ ಅಂಟಿಕೊಂಡ ಚಟುವಟಿಕೆಗಳು, ಜವಾಬ್ದಾರಿಗಳೆಲ್ಲ ಮಹಿಳೆಯರು ಸಾರ್ವಜನಿಕ ವಲಯದಲ್ಲಿ ದುಡಿಯಗೂಡದಂತೆ ಅಡ್ಡಿ ಮಾಡುತ್ತದೆ.

ಈ ಖಾಸಗಿ ವಲಯದ ಹೊರೆಹೊತ್ತ ಸ್ತ್ರೀಯರು ಹೊರಗೂ ದುಡಯಬೇಕಾದಾಗ ಅನಿವಾರ್ಯವಾಗಿ ಅರೆಕಾಲಿಕ ಕೆಲಸಗಳನ್ನು ಕಡಿಮೆ ಕೌಶಲವನ್ನು ಅಪೇಕ್ಷಿಸುವಂತಹ

ಉದ್ಯೋಗಗಳತ್ತ ಹೊರಳಿಕೊಳ್ಳುತ್ತಾರೆ. ಒಳಗಿನ ಮತ್ತು ಹೊರಗಿನ ಇಬ್ಬಗೆಯ ದುಡಿಮೆಗಳಿಂದ ಹೆಣ್ಣು ಅಧಿಕ ಶ್ರಮಜೀವಿಯಳಾಗಿದ್ದು ಹೆಚ್ಚು ಜರ್ಜರಿತಳಾಗುತ್ತಾಳೆ ಎಂಬುದರತ್ತ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಒತ್ತುಕೊಡುತ್ತಾರೆ.[16]

ಸಿಮೊನ್‌ದ ಬೋವಾ ತನ್ನ 'ದಿ ಸೆಕೆಂಡ್ ಸೆಕ್ಸ್' ಕೃತಿಯಲ್ಲಿ ಸಾಮಾಜಿಕವಾಗಿ ಹೆಣ್ಣು ಹೇಗೆ ಶೋಷಿತಳಾಗಿದ್ದಾಳೆ ಎಂಬುದನ್ನು ವಿವರಣಾತ್ಮಕವಾಗಿ ವಿವರಿಸಿದ್ದಾಳೆ. ಆ ಮೂಲಕ ಸಾಮಾಜಿಕ ಅಸಮಾನತೆಯನ್ನು ವಿವರಿಸಿದ್ದಾಳೆ. ಜೊತೆಗೆ ಪ್ರಪಂಚಾದ್ಯಂತ ಮಹಿಳೆಯರು ದುಡಿಮೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದು ಪುರುಷಲೋಕ ನಿರ್ಮಾಣದಲ್ಲಿ ತೊಡಗಿದ್ದಾಗ ಹೆಣ್ಣು ಮನೆಗೆಲಸದಲ್ಲಿ ನಿರತವಾಗಬೇಕೆಂಬುದು ಆರ್ಥಿಕವಾಗಿ ಹೆಣ್ಣು ದುಡಿಮೆಯಲ್ಲಿ ತೊಡಗಿದ್ದರೂ ಸಣ್ಣಪುಟ್ಟ ಕಾರ್ಯಗಳಲ್ಲಿ ತೊಡಗಿದ್ದರೂ ಆರ್ಥಿಕ ಸ್ವಾವಲಂಬನೆ ಸಾಧಿಸಿದರೂ ಅದನ್ನು ಗಮನಿಸಲಾರದಷ್ಟು ಗುರುತಿಸಲಾರದಷ್ಟು ಅಸಮತೋಲನ ಸಾಮಾಜಿಕವಾಗಿ ಏರ್ಪಟ್ಟ ಸಂದರ್ಭಗಳಿವೆ. ಆ ಮೂಲಕ ಏರ್ಪಟ್ಟ ಅಸಮತೋಲನ ಸ್ಥಿತಿಯನ್ನು ಗ್ರಹಿಸಲಾರದಷ್ಟು ವ್ಯತ್ಯಾಸ ಸಾಮಾಜಿಕವಾಗಿ ಏರ್ಪಟ್ಟಿದ್ದನ್ನು ಬೋವಾ ಗುರುತಿಸಿದ್ದಾಳೆ.

ಸಿಮೊನ್ ದ ಬೋವಾಳ ಪ್ರಸ್ತುತತೆ ಸ್ತ್ರೀವಾದಕ್ಕೆ ತೀರಾ ಹತ್ತಿರವಾಗುವುದು ಈ ಮೂಲಕವೇ. ಸೈದ್ಧಾಂತಿಕ, ವೈಜ್ಞಾನಿಕ ಮಾದರಿಯಲ್ಲಿ ರಚಿತವಾಗಿರುವ 'ದಿ ಸೆಕೆಂಡ್ ಸೆಕ್ಸ್' ಕೃತಿ ಎಲ್ಲಾ ರೀತಿಯಲ್ಲಿ ಮಂಡನೆಯಾಗುತ್ತಿರುವ ಆಂಗ್ಲ ಅಮೇರಿಕಾದ ಸ್ತ್ರೀವಾದ. ತೀವ್ರಗಾಮಿ ಮತ್ತು ಸಾಂಸ್ಕೃತಿಕ ಸ್ತ್ರೀವಾದ, ಕಪ್ಪು ಸ್ತ್ರೀವಾದ, ಲೆಸ್ಬಿಯನ್ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ ಹೀಗೆ ಬೇರೆ ಬೇರೆ ನೆಲೆಯಲ್ಲಿ ಕಂಡುಬಂದರೂ ಬೋವಾಳ ಒದು ಕೃತಿ ಇಡೀ ವಿಶ್ವದ ಎಲ್ಲಾ ಮಹಿಳೆಯರ ತುಡಿತವೆಂದೇ ಹೇಳಬಹುದು. ಪಿತೃಪ್ರಧಾನದ ವ್ಯವಸ್ಥೆಯ ಸಂಕೋಲೆಯಿಂದ ಬಿಡಿಸಿಕೊಳ್ಳಲು ಮಾಡಿದ ಹೋರಾಟ, ಜೊತೆಗೆ ಬೋವಾ ತನ್ನ ಕೃತಿಯಾದ 'ದಿ ಸೆಕೆಂಡ್ ಸೆಕ್ಸ್' ಮೂಲಕ ವ್ಯವಸ್ಥೆಯ ಜಾಡ್ಯವನ್ನು ಮೂಲದಿಂದ ಕಿತ್ತೊಗೆದು ಮಹಿಳೆಯರನ್ನು ಬಿಡುಗಡೆಗೊಳಿಸುವಂತೆ ಮಾಡಿದ ಕೃತಿ ಎಂದೇ ಕರೆಯಬಹುದು. ಆದ್ದರಿಂದ ಪ್ರಸ್ತುತ ಪ್ರಪಂಚದಲ್ಲಿ ಏರ್ಪಡುತ್ತಿರುವ ಎಲ್ಲಾ ಸ್ತ್ರೀವಾದಿ ಚಳುವಳಿಗೆ ಬೋವಾಳ ಚಿಂತನೆ ಅಗತ್ಯವಿದೆ ಎಂಬುದನ್ನು ಕಾಣಲು ಸಾಧ್ಯವಾಗಿದೆ.

ಬೋವಾಳ ಸ್ತ್ರೀವಾದದ ಚಿಂತನೆಯ ತಾತ್ವಿಕ ಅಂಶಗಳು ಪ್ರಸ್ತುತ ಸ್ತ್ರೀವಾದಿ ಚಿಂತನೆಗೆ ಹೇಗೆ ಮುಖ್ಯವಾಗುತ್ತದೆ ಎಂಬುದನ್ನು ಗಮನಿಸುವುದಾದರೆ ಬೋವಾಳ ಚಿಂತನಾಶೈಲಿ ಬಹು ವಿಸ್ತಾರವಾಗಿದ್ದು ಚಿಂತನೆಗೀಡು ಮಾಡುತ್ತಾ ಹೋಗುತ್ತದೆ. ಚಿಂತನೆಯು ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ ನಂತರ ರೂಪಿತವಾಗುತ್ತಾಳಷ್ಟೇ ಎಂಬ ಸಾಲು ಹೆಣ್ಣಿನ ಅಸ್ಥಿತ್ವವನ್ನು ಚರ್ಚೆ ಮಾಡುವಂತೆ ತೊಡಗಿಸುತ್ತದೆ. ಬೋವಾಳ ದಿ ಸೆಕೆಂಡ್ ಸೆಕ್ಸ್ ಎಲ್ಲಾ ಸ್ತ್ರೀವಾದಿ ಪಂಥಗಳ ಜೊತೆಗೂಡಿ ಹೊಸ ಆಲೋಚನಾ ಕ್ರಮವನ್ನು ಕೊಡುತ್ತಾ ಹೋಗುತ್ತದೆ. ಆ ಮೂಲಕ ಬೋವಾಳ ಚಿಂತನೆ ಪ್ರಸ್ತುತವಾಗುತ್ತಾ ತನ್ನ ಪ್ರಾಮುಖ್ಯತೆ ಹೆಚ್ಚಿಸಿಕೊಳ್ಳುತ್ತದೆ.

ಹೆಣ್ಣು, ಹೆಣ್ತನ ಎಂಬುದರ ಬಗ್ಗೆ ಇರುವ ಚರಿತ್ರೆಯ ಎಲ್ಲಾ ಅಂಶಗಳನ್ನು ಕಟ್ಟಿಕೊಡುತ್ತದೆ. ಸಮುದಾಯದಲ್ಲಿ ಮಹಿಳೆಯಾಗಿ (ಹೆಣ್ಣಾಗಿ) ರೂಪಿತವಾಗಿರುವ ಬಗ್ಗೆ ಬೋವಾ ಚರ್ಚಿಸುತ್ತಾಳೆ. ಬೋವಾಳ ವಿಚಾರಧಾರೆ ಪ್ರಪಂಚದ ಯಾವುದೋ ನಿರ್ದಿಷ್ಟ ಮಹಿಳೆಯ ತುಡಿತವಾಗಿಲ್ಲ. ವಿಸ್ತೃತ ಆಲೋಚನಾ ಮಾದರಿ ಎಲ್ಲೆಡೆಯೂ ಪ್ರಸ್ತುತವಾಗುವ ಅಂಶವನ್ನು ನಾವು ಗುರುತಿಸಬಹುದು.

ಬೋವಾ ಹೇಳುವಂತೆ ಮೊದಲು ನಾವು ಕೇಳಿಕೊಳ್ಳಬೇಕಾದ ಪ್ರಶ್ನೆ 'ಹೆಂಗಸರೆಂದರೆ ಏನು ? ಈ ರೀತಿಯ ಪ್ರಶ್ನೆಯನ್ನು ನಮಗೆ ನಾವೇ ಕೇಳಿಕೊಳ್ಳುವುದರ ಮೂಲಕ ಹೆಣ್ಣಿನ ಅಸ್ಥಿತ್ವವನ್ನು ಹುಡುಕಾಟ ಮಾಡುವ ಸಂದರ್ಭವಿಶ್ವವ್ಯಾಪಿಯಾದುದಾಗಿದೆ. ಮಾನವ ಸಮೂಹದ ಹುಡುಕಾಟ ಅರ್ಧ ಭಾಗವಾಗಿದ್ದರೂ ಸಹ ಹೆಣ್ಣು ಅನ್ಯಲಿಂಗವಾಗಿ ಬೇರ್ಪಟ್ಟ ಕ್ರಮವನ್ನು ಈ ಮೂಲಕ ಗ್ರಹಿಸಬಹುದು.

ಬೋವಾಳ ಚಿಂತನೆ ನಿರ್ದಿಷ್ಟ ಕಾಲಕ್ಕೆ ಕೆಲವೇ ವರ್ಗಕ್ಕೆ ಸೀಮಿತವಾಗಿರದಿರುವುದು. ಅವು ಕಾಲದ ಅಗತ್ಯ ಸಂಸ್ಕೃತಿ, ಪರಂಪರೆ, ಸಾಮಾಜಿಕ ಸಂದರ್ಭ ರಾಜಕೀಯ ಸಂದರ್ಭ ಆರ್ಥಿಕ ಇವುಗಳನ್ನೆಲ್ಲ ಅವಲಂಬಿಸಿ ಬೆಳೆದ ಒಂದು ಪ್ರಕ್ರಿಯೆ ಎಂಬುದು ಸಾಬೀತಾಗಿದೆ. ಹೆಣ್ಣು ಇಂದು ನಿಭಾಯಿಸುತ್ತಿರುವ ಬೇರೆ ಬೇರೆ ಜವಾಬ್ದಾರಿಗಳು, ಸಂಬಂಧಗಳು, ಕೌಟುಂಬಿಕ ಜವಾಬ್ದಾರಿ ಆರ್ಥಿಕ ಸ್ವಾವಲಂಬನೆ ಇವೆಲ್ಲವನ್ನು ಪರಿಚಯಿಸುತ್ತದೆ. ಈ ಮೂಲಕ ಹೆಣ್ಣು ಸಮಾಜದಲ್ಲಿ ಹೇಗೆ ತನ್ನನ್ನು ತಾನು ತೊಡಗಿಸಿಕೊಂಡಿದ್ದಾಳೆಂಬ ಪರಿಚಯ

ಮಾಡಿಕೊಡುವುದರ ಜೊತೆಗೆ ಹೆಣ್ಣಿನ ಸಂದರ್ಭವನ್ನು ಅಧ್ಯಯನ ಮಾಡಿದ ಆಕೆಯ ಅಸ್ಥಿತ್ವವನ್ನು ಹುಡುಕಾಟ ಮಾಡಿದ ಬೋವಾಳ ಪ್ರಯತ್ನ ಅಗತ್ಯವಾದುದು ಎಂದು ಕರೆಯಬಹುದು. ಸಾರ್ತೆ ಜೊತೆಗಿನ ಚರ್ಚೆಯ ನಂತರ ಹೆಣ್ಣಿನ ಅಸ್ಥಿತ್ವ ಹುಡುಕಾಟ ಮಾಡುವಲ್ಲಿ ಬೋವಾಳ ವೈಜ್ಞಾನಿಕ, ಸೈದ್ಧಾಂತಿಕ ಮಂಡಣೆ, ವೈಚಾರಿಕ ಆಲೋಚನಾ ಕ್ರಮ ರೂಢಿಸಿಕೊಂಡು ಹೊಸರೂಪ ಪಡೆಯಿತೆನ್ನಬಹುದು.

ಅಡಿಟಿಪ್ಪಣಿ

1. ಸ್ತ್ರೀವಾದ , ಬಿ.ಎನ್. ಸುಮಿತ್ರಾಬಾಯಿ, ಪು.ಸಂ.-1
2. ವಿಮರ್ಶೆಯ ಪರಿಭಾಷೆ, ಓ.ಎಲ್. ನಾಗಭೂಷಣಸ್ವಾಮಿ, ಪು.ಸಂ-404.
3. ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ : ಒಂದು ಸಮಾಲೋಚನೆ ಡಾ. ಸರೋಜಿನಿ ಶಿಂತ್ರಿಯವರ ಲೇಖನ. (ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ ಪುಸ್ತಕದಿಂದ)
4. ಅದೇ ಪು.ಸಂ-7
5. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ- ಪು.ಸಂ-12
6. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು - ಪು.ಸಂ-28
7. ಸ್ತ್ರೀವಾದಿ ಓದು - ಪು.ಸಂ-67.
8. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿ. ಪು.ಸಂ.-28.
9. ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು, ಡಾ. ಬಿ.ಎನ್. ಸುಮಿತ್ರಾಬಾಯಿ, ಪು-1
10. ಸ್ತ್ರೀವಾದ - ಡಾ. ಬಿ.ಎನ್. ಸುಮಿತ್ರಾಬಾಯಿ, ಪು.ಸಂ.-33.
11. ಅದೇ ಪುಟ- 34.
12. ಅದೇ ಪುಟ-36
13. ಅದೇ ಪುಟ-36.
14. ಅದೇಪುಟ-42
15. ' ದಿ ಸೆಕೆಂಡ್ ಸೆಕ್ಸ್' - ಅನುವಾದ : ಎಚ್.ಎಸ್. ಶ್ರೀಮತಿ - ಒಂದು ಕನ್ನಡ ಓದು.ಪು.ಸಂ.-434
16. ಸ್ತ್ರೀವಾದ - ಡಾ. ಬಿ.ಎನ್. ಸುಮಿತ್ರಾಬಾಯಿ, ಪು.ಸಂ-50.

# ಉಪಸಂಹಾರ

'ಸಿಮೊನ್ ದ ಬೋವಾ ಮತ್ತು ಸ್ತ್ರೀವಾದಿ ಚಿಂತನೆ' ಎಂಬ ಪ್ರಬಂಧದಲ್ಲಿ ಸಿಮೊನ್ ದ ಬೋವಾ ಮಂಡಿಸಿರುವ ಸ್ತ್ರೀವಾದವನ್ನು ಚರ್ಚಿಸಲಾಗಿದೆ. ಆದಿ ಸ್ತ್ರೀವಾದಿ ಚಿಂತಕಿ ಎಂದು ಬೋವಾಳನ್ನು ಕರೆಯಬೇಕಾದಗರೆ ಆಕೆ ನಡೆಸಿದ ಸುದೀರ್ಘ ಚರ್ಚೆ ಎಲ್ಲಾ ರೀತಿಯ ನೋಟಕ್ರಮಗಳನ್ನು ಒದಗಿಸುವ ಕ್ರಮ ''ಸ್ತ್ರೀವಾದ'' ಎಂಬ ಚಿಂತನೆಗೆ ಹೊಸ ಆಯಾಮವನ್ನು ಕೊಟ್ಟವಳು ಎಂಬುದನ್ನು ಕಂಡಿದ್ದೇವೆ. ಸಿಮೊನ್ ದ ಬೋವಾ ಆಕೆಯ ಚಿಂತನೆ ಇಡಿ ಜಗತ್ತಿನ ಸ್ತ್ರೀವಾದಕ್ಕೆ ಹೊಸ ರೂಪವನ್ನು ಕೊಟ್ಟಿತೆಂದು ಹೇಳಬಹುದು. ಸ್ತ್ರೀ ಅನ್ಯಲಿಂಗವೆಂದು ಬೇರ್ಪಟ್ಟಿರುವುದಕ್ಕೆ ಇರುವ ಕಾರಣಗಳು ತಿಳಿದು ಬಂದವು. ಸ್ತ್ರೀ ಎಂದರೇನು ? ಆಕೆಯ ಸ್ಥಾನ ಮನುಷ್ಯಳೆಂಬ ಮೂಲಭೂತ ಅಂಶಗಳನ್ನು ಬೋವಾ ವಿವರಿಸಿಕೊಟ್ಟಿದ್ದಾಳೆ.

ಜೈವಿಕ, ಸಾಮಾಜಿಕ, ರಾಜಕೀಯ, ಚಾರಿತ್ರಿಕ ನೆಲೆಗಳಲ್ಲಿ ಹೇಗೆ ಹೆಣ್ಣು ಅನ್ಯವಾಗಿಯೇ ಉಳಿದಿದ್ದಾಳೆ ಎಂಬ ಅಂಶವು ಮುಖ್ಯವಾಗುತ್ತದೆ. ಸ್ತ್ರೀ ಸಂಘಟಿತಳಾಗುವ, ಸಬಲಳಾಗುವ ಬಗ್ಗೆ ಬೋವಾ ಹೆಚ್ಚು ಕಾಳಜಿ ತೋರಿದ್ದಾಳೆ. ವಿಜ್ಞಾನ, ತಂತ್ರಜ್ಞಾನ, ಶಿಕ್ಷಣ, ಮಹಿಳೆಯರಿಗೆ ಹೊಸ ಹಾದಿಯನ್ನೇ ತೆರೆದಿರುವ ಕ್ರಮವನ್ನು ಗಮನಿಸಬಹುದು.

ಪರಂಪರೆ, ಸಂಸ್ಕೃತಿ, ಆಚಾರ, ವಿಚಾರ, ನಾಗರೀಕತೆ ಇವೆಲ್ಲವೂ ಮಹಿಳೆಗೆ ಕಡಿವಾಣ ಹಾಕಿದೆಯಾದರೂ ಇತ್ತೀಚಿನ ದಿನಗಳಲ್ಲಿ ಬಂಧನದಿಂದ ಸಡಿಲಗೊಂಡ ಎಷ್ಟೋ ಮಹಿಳೆಯರನ್ನು ಅವರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಬಿಡಿಸಿರುವ ಸಾಕ್ಷಿ ಸಾಕಷ್ಟಿದೆ. ಪುರುಷ ಪ್ರಧಾನ ಸಮಾಜದಲ್ಲಿಚಿತ್ರಿತರಾದ ಅಸಂಖ್ಯಾತ ಮಹಿಳೆಯರು ಬಿಡುಗಡೆ ಹೊಂದಿದ ಉದಾಹರಣೆಗಳು ಸಾಕಷ್ಟಿವೆ. ದಿ ಸೆಕೆಂಡ್ ಸೆಕ್ಸ್ ಕೃತಿಯು ಬೋವಾ ಸ್ತ್ರೀ ಚಳುವಳಿಗೆ ಅಗತ್ಯವಿರುವ ಮೂಲಭೂತ ಅಂಶಗಳ ಬಗ್ಗೆ ಚರ್ಚೆ ಮಾಡುತ್ತಾಳೆ. ೧೮-೧೯ನೇ ಶತಮಾನಕ್ಕಿಂತ ಮುಂಚೆ ಸ್ತ್ರೀವಾದಿ ಚಿಂತನೆ, ಸ್ತ್ರೀವಾದಿ ಚಿಂತಕರಿದ್ದರೂ ಆಕೆ ತನ್ನ ಕೃತಿಯ ಮೂಲಕ ಇಡೀ ವಿಶ್ವಕ್ಕೆ, ಸ್ತ್ರೀವಾದಿ ಚಿಂತನೆಗೆ ಅಧಿಕೃತತೆಯನ್ನು ಒದಗಿಸಿ ಕೊಟ್ಟಿದ್ದಾಳೆಂಬುದನ್ನು ಮರೆಯುವಂತಿಲ್ಲ. ಹಳೆಯ ಪ್ರಶ್ನೆಗಳು ಸಾಕಷ್ಟಿದ್ದರೂ ಅವುಗಳಿಗೆ ವೈಜ್ಞಾನಿಕವಾಗಿ ಸೈದ್ಧಾಂತಿಕ ಮಾದರಿಯಲ್ಲಿ ಉತ್ತರ ಹುಡುಕುವ ಪ್ರಯತ್ನ ಮಾಡಿದ್ದಾಳೆ.

ಹೆಣ್ಣು ಗಂಡು ಎಂಬ ವಿಭಜನೆ ಆಗಿರುವುದು ಸಮಾಜದಲ್ಲಿ ಸಿದ್ಧವಾಗಿದ್ದ ಮೌಲ್ಯಗಳಿಗೆ ಕಟ್ಟುಬಿದ್ದು ಎಂಬುದನ್ನು ತೋರಿಸಿಕೊಟ್ಟಿದ್ದಾಳೆ ಹಲವಾರು ಸಂಕಥನಗಳು ಹೇಗೆ ಸಮಾಜದಲ್ಲಿ ರೂಢಿಗತವಾಗಿ ಬಂದಿದೆ ಎಂಬುದನ್ನು ವಿವರವಾಗಿ ನೀಡಿದ್ದಾಳೆ. ಮನಶಾಸ್ತ್ರೀಯ ದೃಷ್ಟಿಕೋನದಲ್ಲಿ 'ಹೆಣ್ಣು' ನಿರ್ಮಿತಗೊಂಡಿರುವ ಕ್ರಮವನ್ನು ಬೋವಾ ಚರ್ಚಿಸಿದ್ದಾಳೆ. ಹುಟ್ಟು ಬೆಳವಣಿಗೆ, ಬಾಲ್ಯ, ಯೌವ್ವನ, ಮುಪ್ಪು ಇವುಗಳ ಬಗ್ಗೆ ಬೋವಾ ಚರ್ಚೆ ಮಾಡುತ್ತಾ ದೈಹಿಕವಾಗಿ ಹೆಣ್ಣಿನಲ್ಲಿ ಉಂಟಾಗುವ ಪರಿಣಾಮ ಎಂಥದ್ದು ಎಂಬುದನ್ನು ಬೋವಾ ಚರ್ಚೆ ಮಾಡಿದ್ದಾಳೆ.

''ಪುರುಷ ಲೋಕ ನಿರ್ಮಾಣ ಕಾರ್ಯವನ್ನು ಕೈಗೊಂಡರೆ ಹೆಣ್ಣು ತನಗೆ ತಾನೇ ಒಂದು ಚರಿತ್ರೆಯನ್ನು ನಿರ್ಮಿಸಿಕೊಂಡು ಬಂದ ಬಗೆಯನ್ನು ವಿವರಿಸಿದ್ದಾಳೆ.'' ಕೇವಲ ಅಡಿಗೆ ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿ ಇದ್ದ ಹೆಣ್ಣು ಆರ್ಥಿಕತೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ರೀತಿಯನ್ನು ಕುಟುಂಬ ನಿರ್ವಹಣೆಯಲ್ಲಿ ಆಕೆ ಗಟ್ಟಿಯಾಗುತ್ತಾ ಬಂದ ಉದಾಹರಣೆಗಳು ಸಾಕಷ್ಟಿದೆ.

ಫ್ರಾನ್ಸ್ ದೇಶದ ಸಿಮೋನ್ ದ ಬೋವಾ ಸೆಕೆಂಡ್ ಸೆಕ್ಸ್ ಎಂಬ ಕೃತಿಯಲ್ಲಿ ಇನ್ನೂ ತೀವ್ರವಾದ ಧೋರಣೆಗಳನ್ನು ಮಂಡಿಸಿದಳು. ಹೆಣ್ಣಿನ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಕುರಿತು ಅಧ್ಯಯನ ಮಾಡುವ ಮಹತ್ವದ ಕೃತಿ ಇದು. ಕೇವಲ ಪುರುಷನನ್ನು ಮಾತ್ರ ಕರ್ತೃ (ಸಬ್ಜೆಕ್ಟ್) ಎಂದು ತಿಳಿಯಲಾಗಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಪುರುಷನಿಗೆ ಮಾತ್ರ ಪ್ರಾಧಾನ್ಯವಿದೆ. ಹೆಣ್ಣನ್ನು ಅನ್ಯ (ದಿ ಅದರ್) ಎಂದು ಭಾವಿಸಲಾಗಿದೆ. ಪುರುಷ ಲೇಖಕರ ಬರವಣಿಗೆಯಲ್ಲಿ ಹೆಣ್ಣು ಕೇವಲ ಕೆಲವು ಮಾದರಿಗಳಲ್ಲಿ ಮಾತ್ರ ಚಿತ್ರಿತವಾಗಿದ್ದಾಳೆ ಎಂದು ಸಿಮೋನ್ ದ ಬೋವಾ ತೋರಿಸಿಕೊಟ್ಟಳು.1

ಅಲೆಮಾರಿಗಳ ಬದುಕಿನಿಂದ ಹಿಡಿದು ಹೆಣ್ಣು ಹೇಗೆ ಇಂದಿನವರೆಗೂ ಪುರುಷ ನಿರ್ಮಿತ ಚೌಕಟ್ಟಿನೊಳಗೆ ಬೆರೆತು ಹೋಗಿದ್ದಾರೆ ಎಂಬುದು ಈ ಮೂಲಕ ತಿಳಿಯಲು ಸಾಧ್ಯವಾಗಿದೆ. ಧಾರ್ಮಿಕ ಒತ್ತಡಗಳು, ಮೂಢ ಆಚರಣೆ, ಅಂಧಾನುಕರಣೆ ಇವೆಲ್ಲವೂ ಸಮಾಜದಲ್ಲಿ ಹೇಗೆ ಅಸಮತೋಲನ ಉಂಟುಮಾಡುತ್ತದೆ ಎಂಬುದನ್ನು ಬೋವಾ ಸುದೀರ್ಘ ಚರ್ಚೆ ಮಾಡಿದ್ದಾಳೆ. ಹೆಣ್ಣಿಗಿರುವ ನಿಸರ್ಗದತ್ತವಾದ ಜವಾಬ್ದಾರಿಗಳು ಆಕೆಯನ್ನು ತತ್ತರಿಸುವಂತೆ ಮಾಡಿರುವ ಕ್ರಮದ ಬಗ್ಗೆಯೂ ಬೋವಾ ಚರ್ಚಿಸಿದ್ದಾಳೆ.

ಸಿಮೋನ್ ದ ಬೋವಾ ಅವರ ಪ್ರಸಿದ್ಧ ಕೃತಿ 'ದ ಸೆಕೆಂಡ್ ಸೆಕ್ಸ್' ಹೇಳುವಂತೆ ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು. ಹೆಣ್ಣು ಸಾಮಾಜಿಕ ಪ್ರಕ್ರಿಯೆಗಳಿಂದ ''ಆಗುತ್ತಾಳೆಯೇ'' ವಿನಾ ಯಾರೂ ಹೆಣ್ಣಾಗಿ ಹುಟ್ಟುವುದಿಲ್ಲ. ಈ ಬಗೆಯ ಸಮರ್ಥನೆಯು ಮೇಲ್ನೋಟಕ್ಕೆ ಸಹಜವೆಂದೂ, ಬದಲಾಯಿಸಲಾಗದ್ದೆಂದೂ ತಿಳಿದ ಕಲ್ಪನೆಗಳನ್ನು ಪ್ರಶ್ನಿಸಲು ಚಾರಿತ್ರಿಕವಾಗಿ ವಿಮರ್ಶಿಸಲು ಅಗತ್ಯವಾದ ನೈತಿಕ ಧೀಮಂತಿಕೆಯನ್ನು ಮಹಿಳೆಯರಿಗೆ ನೀಡಿತು. ಪ್ರತಿಯೊಂದು ಸಮಾಜದಲ್ಲೂ ಮಹಿಳೆಯರು ಲಿಂಗಪ್ರಬೇಧ ಮತದ ಪ್ರಭಾವಶಾಲೀ ಅಧಿಕಾರ ಶಕ್ತಿಯನ್ನು ಪ್ರಶ್ನಿಸುವುದು ಸಾಧ್ಯವಾಯಿತು. ಆದುದರಿಂದ ಸ್ತ್ರೀಗೊಂದು ಇತಿಹಾಸವಿದೆ. ''ಅನಂತ ಸ್ತ್ರೀತ್ವ'', ''ಸ್ತ್ರೀ ಸಹಜಗುಣ''ಎನ್ನುವುದೆಲ್ಲ ಪೊಳ್ಳು ಎನ್ನುವ ಸಮರ್ಥನೆಯ ಮೂಲಕವೇ ಸ್ತ್ರೀ ಪರಾಧೀನತೆಯನ್ನು ಮಹಿಳೆಯರು ಪ್ರಶ್ನಿಸಬೇಕಾಗಿದೆ. ಈ ತವಕ ಸಾಮಾನ್ಯ ಸತ್ಯ ಸಂಗತಿ ಎಂದು ನಾವು ತಿಳಿದುಕೊಂಡು ಬಂದಿರುವ ಅನೇಕ ಸಂಗತಿಗಳೇ ಈಗ ಸಮಾಜೋ - ಸಾಂಸ್ಕೃತಿಕ ಹೇರುವಿಕೆಯಾಗಿರುವ ನಿಜವನ್ನು ನಾವು ಅರಿಯಬೇಕಾಗಿದೆ. ಸಹಜ, ನಿಜವೆಂದು ನಂಬುವ ಹಾಗೆ ಈ ಭ್ರಮೆಗಳನ್ನು ಬಿಂಬಿಸಲಾಗಿತ್ತು.2

ಸಾಮಾಜಿಕವಾಗಿ ಹೆಣ್ಣಿಗಿರುವ ಸ್ಥಾನ, ಸ್ತ್ರೀವಾದದ ಪ್ರಭಾವ ಲಿಂಗಬೇಧ, ಸಂಸ್ಕೃತಿ, ಪರಂಪರೆ ಎಲ್ಲವೂ ಕಾಲದ ತೆಕ್ಕೆಯಲ್ಲಿ ಸಿಲುಕಿ ಹೋಗುತ್ತದೆ. ಹೆಣ್ಣು-ಗಂಡನ್ನು ಜೈವಿಕ ವ್ಯತ್ಯಾಸದಿಂದ ಮಾತ್ರ ಗುರುತಿಸಬಾರದು. ಮಾನವೀಯ ಮೌಲ್ಯಗಳು ನೆಲೆ ಬಹಳ ಪ್ರಮುಖವಾಗುತ್ತದೆ. ದೇಹಲಕ್ಷಣವೆಂಬ ಸ್ಥಿತಿಯು ತೀರಾ ಸಹಜವಾದುದು. ಪ್ರಕೃತಿಸಹಜವಾದುದು. ಈ ನೈಸರ್ಗಿಕತ ಭಿನ್ನತೆಯು ಸಮಾಜದಲ್ಲಿ ಗಂಡು ಹೆಣ್ಣೆಂಬ ಬೇಧ ಉಂಟುಮಾಡುವ ಸ್ಥಿತಿಯನ್ನು ತಲುಪಿತು. 'ಲಿಂಗತಾರತಮ್ಯ'ಎನ್ನುವ ಸ್ಥಿತಿಯು ಸರಪಳಿಯಾಗಿ ಒಂದಕ್ಕೊಂದು ಅಸಮತೋಲನಕರ ಸ್ಥಿತಿಯು ನಿರ್ಮಾಣವಾಗಿತ್ತು. ಅಷ್ಟರೊಳಗೆ ಬೋವಾಳ ಚಿಂತನೆ ಸ್ತ್ರೀವಾದಿ ಚಿಂತನೆಗೆ ಸ್ತ್ರೀ ಸಮಾನತೆಗೆ, ಹೊಸ ರಹದಾರಿ ತಲುಪಿತು. ಅಸಮತೋಲನ ಉಂಟಾಗಿದ್ದ ಸಮಾಜಕ್ಕೆ ಚಿಕಿತ್ಸೆ ನೀಡಿದಂತ ಕೃತಿ ಬೋವಾಳ 'ದಿ ಸೆಕೆಂಡ್ ಸೆಕ್ಸ್' ಎಂದು ಹೇಳಬಹುದು.

ಭಾರತೀಯ ಮಟ್ಟದಲ್ಲಿ ರಾಜಕೀಯವಾಗಿ ಅಂಥ ಪ್ರಮುಖವಾಗದೆ ಇದ್ದರೂ ಫ್ರಾನ್ಸ್‌ನಲ್ಲಿ 'ಮತದಾನ' ದ ಹಕ್ಕನ್ನು ಹೋರಾಟ ಮಾಡಿ ಪಡೆದರು ಎಂಬುದಕ್ಕೆ

ಸಾಕ್ಷಿಯಿದೆ. ಆಸ್ತಿಯ ಹಕ್ಕು, ಖಾಸಗಿ ಒಡೆತನ ಎಲ್ಲವೂ ಲೋಕದಲ್ಲಿ ಎಲ್ಲೆಡೆ ಹಬ್ಬಿರುವಂಥ ಸಹಜವಾದ ಸ್ಥಿತಿಯಾಗಿದ್ದು ಅನಾದಿ ಕಾಲದಿಂದಲೂ ಹೋರಾಟಗಳು ನಡೆಯುತ್ತಲೆ ಬಂದಿರುವುದು ಸಹಜ ಸ್ಥಿತಿಯಾಗಿ ಏರ್ಪಟ್ಟಿದೆ. ಕೈಗಾರಿಕಾ ಕ್ರಾಂತಿಯ ಪ್ರಭಾವ ಸ್ತ್ರೀವಾದಿ ಚಿಂತನೆಗೆ, ಬಹಳ ಸಹಾಯಕವಾಯಿತು. ಮಹಿಳೆಯರು ಆರ್ಥಿಕವಾಗಿ ಸಬಲಳಾಗಲು ಸಹಕಾರಿಯಾಯಿತು. ಶ್ರಮ ಪಡುವವರಲ್ಲಿ ಮಹಿಳೆಯರ ಪಾಲು ಹೆಚ್ಚಾಯಿತು. ಸವೆದ ಹಳೆಯ ಕಾಲದ ಮೌಲ್ಯಗಳು, ಪೂರ್ವಾಗ್ರಹಗಳು, ಅಜ್ಞಾನ, ಸಮಾಜದ ದಿಕ್ಕುತಪ್ಪಿಸುವಂತ ಸ್ಥಿತಿಯ ಬಗ್ಗೆ ಬೋವಾ ಎಚ್ಚರವನ್ನು ಮೂಡಿಸಿದಳೆಂದ ಹೇಳಬಹುದು.

ಸಿಮೋನ್‌ದ ಬೋವಾ ಕನ್ನಡ ಸಾಹಿತ್ಯಕ್ಕೆ ಎಷ್ಟು ಪ್ರಸ್ತುತಳಾಗುತ್ತಾಳೆ. ಆ ಮೂಲಕ ಕನ್ನಡ ಸ್ತ್ರೀವಾದಿ ಚಿಂತನೆಗೆ ಹೇಗೆ ಹತ್ತಿರವಾಗುತ್ತಾಳೆಂಬುದನ್ನು ಚರ್ಚಿಸುತ್ತಾ ಜನಪದ ಸಾಹಿತ್ಯ ಮತ್ತು ವಚನ ಸಾಹಿತ್ಯ ಎರಡೂ ವಿಷಗಳ ಮೇಲೂ ಬೋವಾಳ ಅಂಶ ಗುರುತಿಸಬಹುದು ಎಂಬುದನ್ನು ಚರ್ಚೆ ಮಾಡಿದ್ದೇನೆ. ಬೋವಾಳ ಸೈದ್ಧಾಂತಿಕ ಮಾದರಿಗೆ ಕನ್ನಡ ಸಾಹಿತ್ಯದಗ ಸ್ವತಂತ್ರ ಅಭಿವ್ಯಕ್ತಿಯನ್ನು ತೌಲನಿಕವಾಗಿ ನೋಡಲು ಹೊರಟರೆ ಬೋವಾ ಜನಪದ /ವಚನ ಸಾಹಿತ್ಯಕ್ಕೆ ಒಂದು ಕ್ರಮವನ್ನು ಒದಗಿಸುತ್ತಾಳೆ ಎಂಬ ಅಂಶ ಸ್ಪಷ್ಟವಾಗಿದೆ.

ಸಮಕಾಲೀನ ಸ್ತ್ರೀವಾದದೊಟ್ಟಿಗೆ ಬೋವಾ ಹೇಗೆ ಪ್ರಸ್ತುತಳಾಗುತ್ತಾಳೆ ಎಂದು ಚರ್ಚೆ ಅಗತ್ಯವಿದೆ. ನೇರವಾಗಿ ಬೋವಾ ಯಾವ ಚಿಂತನೆ, ಆಲೋಚನೆಯ ಮೇಲೆ ಪರಿಣಾಮ ಬೀರದಿದ್ದರೂ ಅಪ್ರಜ್ಞಾಪೂರ್ವಕವಾಗಿ ಬೋವಾ ಪ್ರಭಾವ ಬೀರುತ್ತಿರುವುದಕ್ಕೆ ಸಾಕಷ್ಟು ದಾಖಲೆಗಳಿವೆ.

## ಸಂದರ್ಶನ

## (ಎನ್. ಗಾಯತ್ರಿ ಅವರ ಜೊತೆಗಿನ ನಡೆಸಿದ ಸಂದರ್ಶನ)

ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ 'ಸಿಮೊನ್ ದ ಬೋವಾ ಮತ್ತು ಸ್ತ್ರೀವಾದಿ ಚಿಂತನೆ'' ಎಂಬ ನಿಬಂಧಕ್ಕಾಗಿ ನಡೆಸಿದ ಸಂದರ್ಶನ

**1. ಕನ್ನಡ ಸ್ತ್ರೀವಾದಿ ಹೋರಾಟಕ್ಕೆ ಒದಗಿ ಬಂದ ಪ್ರೇರಣೆ ಯಾವುದು ?**

ಸ್ತ್ರೀವಾದ ಎಂಬುದು ಇಂದಿನದಲ್ಲ. ವೇದಗಳ ಕಾಲದಿಂದಲೂ ಸ್ತ್ರೀಯರು, ಸ್ತ್ರೀವಾದಿ ಚಿಂತನೆ ಎಂಬುದಿದೆ ಎಂದೂ ಹೇಳಿದರು. ಸ್ತ್ರೀವಾದ ಎನ್ನುವುದು ಶಿಸ್ತಾಗಿ ಬೆಳೆದು ಬಂದ ಕ್ರಮ. ಕನ್ನಡದ ಸಂದರ್ಭದಲ್ಲಿ ೧೯೭೦ರ ದಶಕದಿಂದೀಚೆಗೆ ಮೂಡಿ ಬಂದ ಚಳುವಳಿ, ಹೆಣ್ಣಿನ ಸಂದರ್ಭ, ಆತಂಕಗಳು ಒಂದು ರೀತಿಯ ಒತ್ತಡವಾಯಿತು. ಸುತ್ತಲಿನ ಬದಲಾವಣೆಯ ವಾತಾವರಣದ ಪ್ರಭಾವ ಮೂಡಿತು. ರಾಷ್ಟ್ರೀಯ, ಅಂತರಾಷ್ಟ್ರೀಯ ನೆಲೆಯಲ್ಲಿ ಹೋರಾಟದ ಕಾವೇರಿತು, 1982ರಲ್ಲಿ "All India Womens Studies" ಕನ್ನಡದ ಮೇಲೆ ಪರಿಣಾಮ ಬೀರಿತು. ಜೊತೆಗೆ ಸ್ತ್ರೀವಾದ ಅನ್ನುವಂತದ್ದು ಮಾನವೀಯ ನೆಲೆಯನ್ನು ಕಂಡುಕೊಳ್ಳುವಂತಾಯಿತು. "Feminisim is humanism, Feminist right is human right" ಎಂಬ ಘೋಷಣೆಯಾಯಿತು.

**2. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀವಾದ ಎಂದು ಆರಂಭಗೊಂಡಿತು ?**

ಪಾರಿಭಾಷಿಕ ಪದವಾಗಿ ಸ್ತ್ರೀವಾದ ಎಂಬ ಪದ ಬಳಕೆ ಆದುದು ೧೯೭೦-೧೯೮೦ರ ದಶಕದ ಆರಂಭವಾದ ನಂತರ. ಸ್ತ್ರೀವಾದದ ಮೌಲ್ಯಗಳು ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಅಸ್ತ್ರವಾಗಿ ಬಳಕೆ ಆಗಿದ್ದು ೧೯೭೦ರ ಕೊನೆಯಲ್ಲಿ, ನನಗೆ ಬೇಕು ಎನ್ನುವುದರ ಜೊತೆಗೆ ಬೌದ್ಧಿಕ ಜಗತ್ತನ್ನು ಗುರುತಿಸುವ ಸ್ಥಿತಿ ಮೂಡಿತು. ಸ್ತ್ರೀವಾದ ಎನ್ನುವುದು ಒಂದೇ ಆದರೂ ಅದನ್ನು ಅನ್ವಯಿಸಿ ನೋಡುವ ಕ್ರಮವು ಭಿನ್ನವಾಗಿ ಮೂಡಿಬಂದಿತು. ಯಶಸ್ಸು ಮತ್ತು ಸೋಲುಗಳ ನಡುವೆ ಒಂದು ಕ್ರಮವಾಗಿ ಕಾಣಬಂದಿತು.

**3. ಕನ್ನಡ ಸ್ತ್ರೀವಾದಿ ಚಿಂತನೆ ಆರಂಭವಾಗಿ ಎದುರಿಸಿದಂತ ಸವಾಲುಗಳೇನು? ಹಾಗೂ ಬೆಳವಣಿಗೆ ಆಗುತ್ತಾ ಎದುರಿಸುತ್ತಿರುವ ಸವಾಲುಗಳೇನು ?**

ಕನ್ನಡ ಸ್ತ್ರೀವಾದ, ಸ್ತ್ರೀವಾದಿ ಚಿಂತನೆ ಆರಂಭವಾದಾಗ ಎಲ್ಲರೂ ಅನುಮಾನದಿಂದ ನೋಡಿದರು ಸಹಜ ಎನ್ನುವುದಕ್ಕಿಂತ ಪ್ರತ್ಯೇಕ ಸ್ಥಾನಕೊಟ್ಟು ನೋಡಿದರು.

ಸ್ತ್ರೀವಾದ ಆರಂಭದ ದಿನಗಳಲ್ಲಿ ಎದುರಿಸಿದ ಸವಾಲುಗಳೆಂದರೆ

★ ಸ್ತ್ರೀವಾದ ಎನ್ನುವುದು ಪರಕೀಯ ಜ್ಞಾನಶಾಸ್ತ್ರ ಆದರೂ ಸ್ಥಳೀಯ ಅಗತ್ಯಕ್ಕೆ ಬೇಕಾದದ್ದು ಎನಿಸುವಂತೆ ಆಯಿತು.

★ ನಮ್ಮದೇ ಆದ ಪರಂಪರೆಗೆ ಕಟ್ಟಿಕೊಂಡ ಬೇರು ಎನ್ನುವ ಒತ್ತಡದಲ್ಲಿ ಅದು ಸಿಲುಕಿತು.

★ ಸಾಹಿತ್ಯ ಮತ್ತು ಬದುಕು ಎರಡು ಒಂದೇ ಎನ್ನುವಂಥದ್ದು ಪಾಶ್ಚಾತ್ಯ ಸ್ತ್ರೀವಾದವನ್ನು ಪರಿಚಯ ಮಾಡಿಕೊಡುವ ಕ್ರಮವೂ ವಿಶೇಷವಾದದ್ದು ಎಂದು ಗ್ರಹಿಸಬಹುದು.

ಪ್ರಸ್ತುತ ಸಂದರ್ಭದಲ್ಲಿ ಸ್ತ್ರೀವಾದ ಎದುರಿಸುತ್ತಿರುವ ಸವಾಲುಗಳೆಂದರೆ ಸ್ತ್ರೀವಾದ ಬೆಳೆಯುವ ಹಲವಾರು ಮಾರ್ಪಾಡುಗಳನ್ನು ಒಳಗೊಂಡಿವೆ. ಶೋಚನೀಯ ಸ್ಥಿತಿಯಲ್ಲಿದೆ ಎಂದು ಹೇಳಬಹುದು. ಸ್ತ್ರೀವಾದ ಎನ್ನುವುದು ಕೇವಲ ಬರವಣಿಗೆಗೆ ಸೀಮಿತವಾಗಬಾರದು. ಪ್ರಾಮಾಣಿಕವಾಗಿರಬೇಕು. ಸ್ತ್ರೀವಾದದ ಹಿನ್ನೆಡೆಗೆ ಕಾರಣಗಳೇನು ಎಂಬುದು ಗೊತ್ತಾಗಬೇಕಾದರೆ ಅದನ್ನು ಅನ್ವಯಿಸಿ ನೋಡಬೇಕು. ಪುರುಷ ಮಾಡಬೇಕಾದುದೆಲ್ಲ ಹೇಳಬೇಕಾದುದೆಲ್ಲ, ಹೆಣ್ಣು ಮಾಡಿದರಾಯಿತೆನ್ನುವುದೆಲ್ಲ, ಅವನು ಮಾಡಿದೆಲ್ಲ ನಾನು ಮಾಡಿದರೆ ವಿಮೋಚನೆ ಸಾಧ್ಯವೇ ? ಸಮಾನತೆ ಹೆಚ್ಚಾಗಿ ವೈಯಕ್ತಿಕವಾಗಿ ನೋಡಬೇಕು, ವೈಯಕ್ತಿಕತೆಯನ್ನು ಬಿಟ್ಟು ಸ್ತ್ರೀವಾದವಾಗಿ ನೋಡಬೇಕು. ಸ್ತ್ರೀವಾದವನ್ನು ಬದುಕಿಗೆ ಅನ್ವಯಿಸಿ ನೋಡಬೇಕು.

4. ಸಿಮೊನ್ ದ ಬೋವಾ ನಿಮ್ಮ ಮೇಲೆ ಉಂಟುಮಾಡಿದ ಪ್ರಭಾವಗಳೇನು? ಕನ್ನಡ ಸ್ತ್ರೀವಾದಿ ಚಿಂತನೆ ಬೋವಾಳ ಚಿಂತನೆ ಯಾವ ರೀತಿ ಸಂಬಂಧ ಹೊಂದಿದೆ ?

ಆರಂಭದ ಸ್ತ್ರೀವಾದಿ ಚಿಂತನೆಗೆ ಸೂತ್ರೀಕರಿಸಿಕೊಳ್ಳುವಂತೆ ಸಹಾಯ ಮಾಡಿದ ಸಂದರ್ಭ ಬೋವಾಳ ಚಿಂತನೆಯಲ್ಲಿ ಅಡಗಿದೆ. ಮಾರ್ಕ್ಸ್‌ನ ಚಿಂತನೆ ಮಾರ್ಕ್ಸ್‌ವಾದಕ್ಕೆ ಇಂಬುಕೊಟ್ಟಂತೆ, ಹೇಗೆ ಚಿಂತನೆ ಸಿದ್ಧಾಂತಗಳು ಒಂದಕ್ಕೊಂದು ಗಟ್ಟಿತನವನ್ನು ತಂದುಕೊಡುತ್ತದೆ.

ಸಿಮೊನ್ ದ ಬೋವಾಳ ವಿಮರ್ಶೆ ಇವತ್ತು ಏನು ಮಾಡುತ್ತೀವಿ ಎನ್ನುವಲ್ಲಿದ್ದರೆ ಲಿಂಗ, ಜೈವಿಕತೆ, ತಾಯ್ತನ ಇವುಗಳೆಲ್ಲದರ ಪರಿಣಾಮವನ್ನು ವೈಜ್ಞಾನಿಕವಾಗಿ ರೂಪಿಸುವ ಕ್ರಮವಾಗಿ ಕಾಣಬರುತ್ತದೆ.

5. ಬೋವಾಳ ಚಿಂತನೆಯ ಮುಂದುವರೆದ ರೂಪವನ್ನೇನಾದರೂ ಹೇಳುವುಗಕ್ಕೆ ಹುಡುಕಾಟ ಮಾಡುವುದ್ಕಕೆ ಸಾಧ್ಯವಿದೆಯಾ ? ನಿಮ್ಮ ಅಭಿಪ್ರಾಯದಲ್ಲಿ ಬೋವಾಳ ಚಿಂತನೆಯನ್ನು ಪ್ರಸ್ತುತ ಸಂದರ್ಭಕ್ಕೆ ಯಾವ ರೀತಿ ಮುಂದುವರಿಸುತ್ತೀರಾ ?

ಇಂದಿನ ಸವಾಲುಗಳೊಟ್ಟಿಗೆ ಬೋವಾಳ ಚಿಂತನೆಯನ್ನು ಮುಂದುವರೆಸಿ ನೋಡುವುದಾದರೆ, ಸಮುದಾಯದ ಪ್ರಶ್ನೆಯನನ್ನು ಗಂಭೀರವಾಗಿ ತೆಗೆದುಕೊಂಡರೆ ಸಮಾಜದಲ್ಲಿರುವ ಸಲಿಂಗಕಾಮಿಗಳು, ಹಿಜರಾಗಳು, ತಮ್ಮ ಹಕ್ಕನ್ನು ಪರಿಚಯಿಸಿಕೊಳ್ಳುವ ಕ್ರಮ. ಸಮಾಜದ ವಿಶಿಷ್ಟ ಸಮುದಾಯಗಳು ಹೇಗೆ ಪ್ರಸ್ತುತ/ ಅಪ್ರಸ್ತುತವಾಗುತ್ತ ಹೋಗುತ್ತದೆ ಎನ್ನುವುದು, ಪ್ರಶ್ನೆಗಳು, ಮೂಲಭೂತ ಪ್ರಶ್ನೆಗಳು ಎತ್ತುವ ಕ್ರಮವನ್ನು ಗಮನಿಸಬಹುದು. ಹೊಸ ಹೊಸ ಸವಾಲುಗಳ ಜೊತೆಗೆ ಬೋವಾ ನಿರಂತರವಾಗಿ ಬೆಳೆಯುತ್ತಾ ಹೋಗುತ್ತಾಳೆ.

# ಗ್ರಂಥ ಋಣ

1. ಡಾ. ಎಚ್.ಎಸ್. ಶ್ರೀಮತಿ : ದಿ ಸೆಕೆಂಡ್ ಸೆಕ್ಸ್ - ಸಿಮೊನ್ ದ ಬೋವಾ ಒಂದು ಕನ್ನಡ ಓದು
2. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ : ಹಂಪಿ ಪ್ರಸಾರಾಂಗ ಪ್ರಕಟಣೆ
3. ತೇಜಸ್ವಿನಿ ನಿರಂಜನ ಸೀಮಂತಿನಿ ನಿರಂಜನ : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
4. ಕರ್ನಾಟಕ ಸಾಹಿತ್ಯ ಅಕಾಡೆಮಿ : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ
5. ವೀರಣ್ಣ ರಾಜೂರ (ಸಂ) : ಶಿವಶರಣೆಯರ ವಚನಸಂಪುಟ
6. ಡಾ. ಬಿ.ಎನ್. ಸುಮಿತ್ರಾಬಾಯಿ : ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು
7. ಸಿ.ಎನ್. ರಾಮಚಂದ್ರನ್ : ಸಾಹಿತ್ಯ ವಿಮರ್ಶೆ
8. ಡಾ. ಬಿ.ಎನ್. ಸುಮಿತ್ರಾಬಾಯಿ : ಸ್ತ್ರೀವಾದ
9. ಎನ್. ಗಾಯತ್ರಿ : ಮಹಿಳೆ -ಬಿಡುಗಡೆಯ ಹಾದಿಯಲ್ಲಿ
10. ಓ.ಎಲ್. ನಾಗಭೂಷಣಸ್ವಾಮಿ : ವಿಮರ್ಶೆಯ ಪರಿಭಾಷೆ
11. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿ
12. ಸ್ತ್ರೀವಾದಿ ಓದು

*ಅಂತರ್‌ಜಾಲದ ಬಳಕೆ*

1. www.spark ntoes.com
2. www.yahoo.com